ಜೂನ್,—1988

ಸಂಪುಟ—೨೪ ಸಂಚಿಕೆ—೬

# ಸಿದ್ಧಗಂಗಾ



# ಸಿದ್ಧಗಂಗಾ

ಸಂಪುಟ-೨೪ ಸಂಚಿಕೆ-೭ ಜೂನ್, ೧೯೮೮

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮುಚ್ಚಿದ ಕದ ತೆರೆಯುವುದು ಮುಗಿದ ಮೊಗ್ಗರಳುವುದು
ಬಿಚ್ಚಿದ ಜೋಳಿಗೆಯು ತುಂಬುವುದು । ನೀನೊಲಿಯೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಹೆಳವ ಎದ್ದೋದುವನು ಕುರುಡ ಕಣ್ಪಡುವನು
ಮೂಗ ವಾಚಾಳಿಯಾಗುವನು । ನೀನೊಲಿಯೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ತಂಗಡಿ ಹೂವಿನ್ಹಾಂಗೆ ಬಂಗಾರದ ಮೈ ಬಣ್ಣ
ಬೆಳಗಿದ ಗಂಗಳದ್ಹಾಂಗೆ ನಿನಕಣ್ಣು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ

# ಈ ಸಂಚಿಕೆಯಲ್ಲಿ



# ಶ್ರೀವಾಣಿ



ನಾಡಿನಾದ್ಯಂತ ಇದೀಗ ಶಿಕ್ಷಣ ಸಂಸ್ಥೆಗಳು ಪ್ರಾರಂಭಗೊಂಡಿವೆ. ಉತ್ತೀರ್ಣರಾದ ವಿದ್ಯಾರ್ಥಿಗಳು ಮುಂದಿನ ವಿದ್ಯಾಭ್ಯಾಸಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿದ್ದಾರೆ. ತಂದೆ ತಾಯಿಗಳು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಏನೆಲ್ಲ ತ್ಯಾಗ ಮಾಡಲು ಸಿದ್ಧರಿದ್ದಾರೆ. ನಮ್ಮ ಸರಕಾರವೂ ಶಿಕ್ಷಣಕ್ಕಾಗಿ ಕೋಟಿಗಟ್ಟಲೆ ಹಣ ಖರ್ಚು ಮಾಡುತ್ತಿದೆ. ಬುದ್ಧಿ ಜೀವಿಗಳು, ನುರಿತ ಶಿಕ್ಷಣ ತಜ್ಞರು, ಮತ್ತು ಉತ್ತಮ ಪ್ರಜೆಗಳು ನಾಡಿನ ಸಂಪತ್ತೆಂದು ಭಾವಿಸಿ ಮತ್ತು ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಯೋಗ್ಯ ಶಿಕ್ಷಣವೇ ದಿವ್ಯ ಸೂತ್ರವೆಂದೂ ಗ್ರಹಿಸಿ ತನ್ನ ಪ್ರಜೆಗಳ ಶಿಕ್ಷಣದ ಹೊಣೆ ವರ್ಷಂಪ್ರತಿ ಶೈಕ್ಷಣಿಕ ಅಭಿವೃದ್ಧಿಗಾಗಿ ಸರಕಾರ ನಾನಾ ವಿಧಾನದಲ್ಲಿ ಅಪಾರ ಹಣ ಖರ್ಚು ಮಾಡಿ ಶೈಕ್ಷಣಿಕ ಪ್ರಸಾರ ಮಾಡುತ್ತಿದೆ. ಆದರೆ ಫಲಿತಾಂಶ ನಿರೀಕ್ಷಿತ ಮಟ್ಟದಲ್ಲಿರುವುದಿಲ್ಲ. ವಿದ್ಯಾರ್ಥಿಗಳಲ್ಲಿ ಅಶ್ರದ್ಧೆ, ಕ್ರಮವರಿತ ಅಭ್ಯಾಸದ ಕೊರತೆ, ನೈಜ ಮಾರ್ಗದರ್ಶನದ ಅಭಾವ, ಹಂತ ಹಂತವಾದ ಸೂಕ್ತ ತಪಾಸಣೆಯು ನ್ಯೂನತೆಯಿಂದಾಗಿ ಗುಣಮಟ್ಟ ಇಳಿಮುಖವಾಗುತ್ತಿದೆ, ಇದಕ್ಕೆ ಇಂದಿನ ವಿದ್ಯಾಭ್ಯಾಸದ ಗುರಿಯೂ ಕಾರಣವಾಗಿದೆ. ಇಂದು ಅಂಕಗಳಿಕೆಗಾಗಿ ವಿದ್ಯೆಯೇ ಹೊರತು ಜ್ಞಾನಸಂಪಾದನೆಗಾಗಿ ವಿದ್ಯೆಯಲ್ಲವಾಗಿದೆ. ಪದವಿ, ಉದ್ಯೋಗ ಮತ್ತು ಐಷಾರಾಮ ಜೀವನಕ್ಕಾಗಿ ವಿದ್ಯೆ ಎಂಬ ಭಾವನೆ ಬೇರೂರಿದೆ. ಅಂದ ಮಾತ್ರಕ್ಕೆ ಪದವಿ ಉದ್ಯೋಗಗಳು, ತ್ಯಾಜ್ಯವೆಂದಲ್ಲ. ಇವುಗಳ ಜೊತೆಗೆ ಮಾನವೀಯ ಮೌಲ್ಯಗಳನ್ನು ಬೆಳೆಸಿಕೊಳ್ಳುವುದೂ ವಿದ್ಯೆಯ ಗುರಿಯಾಗಬೇಕು, ಸುಸಂಸ್ಕೃತನಾಗಬೇಕು. ಪದವಿ ಉದ್ಯೋಗಗಳು ವ್ಯಕ್ತಿಯ ಬಾಹ್ಯ ಜೀವನ ಮೌಲ್ಯವಾದರೆ, ಶೀಲ, ಸದ್ಗುಣ ಮತ್ತು ಸಚ್ಚಾರಿತ್ರ್ಯಗಳಿಂದ ಆತ್ಮವಿಕಾಸದ ಅರಿವು ಮೂಡಿಸುವುದು ಆಂತರಿಕ ಜೀವನ ಮೌಲ್ಯ. ಈ ಎರಡು ವಿಧ ಜೀವನ ಮೌಲ್ಯಗಳ ಸಂಪಾದನೆ ಮತ್ತು ಸಾಮರಸ್ಯವೇ ವಿದ್ಯಾಭ್ಯಾಸದ ಗುರಿಯಾಗಬೇಕು, ಒಟ್ಟಿನಲ್ಲಿ ಜೀವನದಲ್ಲಿ ಸುಖಶಾಂತಿ ನೆಮ್ಮದಿಗಳಿಗಾಗಿ ವಿದ್ಯೆಯ ಗಳಿಕೆ ಎಂದಾಯಿತು. ವಿದ್ಯಾ ಸಂಪಾದನೆ ಸುಲಭ ಸಾಧ್ಯವಲ್ಲ. ನಿರಂತರ ಸಾಧನೆ ಮಾಡಬೇಕು. "ಸಾಧಕಾವಿದ್ಯಾ ಬಾಧಕಾದ್ರವ್ಯಾ" ಎಂಬಂತೆ ಸಾಧನಾಶೀಲರಿಗೆ ಮಾತ್ರ ವಿದ್ಯೆ ಲಭಿಸುತ್ತದೆ. ವಿದ್ಯಾರ್ಥಿಯಾದವನು ಸೋಮಾರಿಯಾಗದೆ ಶ್ರಮವಹಿಸಬೇಕು, ಸುಖಾಪೇಕ್ಷಿಯಾಗಬಾರದು, ಸುಖಾಪೇಕ್ಷಿಗೆ ವಿದ್ಯೆ ದೊರಕಲಾರದು. "ವಿದ್ಯಾತುರಾಣಾಂ ನ ಸುಖಂ ನ ನಿದ್ರಾ" ಎಂಬಂತೆ ಸುಖ ನಿದ್ರೆಗಳಿಗೆ ಮನ ಮಾಡದೆ ಹಿತ-ಮಿತವಾಗಿ ಸುಖ ನಿದ್ರೆಗಳನ್ನು ಬಳಸಿಕೊಂಡು ವಿದ್ಯಾರ್ಜನೆ ಮಾಡುವುದು ವಿದ್ಯಾರ್ಥಿಯ ಕರ್ತವ್ಯವಾಗಬೇಕು.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
ಪ್ರೊ|| ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20 - 00 ರೂ
ಅಜೀವ ಸದಸ್ಯತ್ವ 201 - 00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.


" ಸಂಪಾದಕರು "
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ




# ಸಂಪಾದಕೀಯ

**ಮೊಗ್ಗುಗಳು ಅರಳುತ್ತಿವೆ,**

ಬಹುಬಣ್ಣ, ಬಹುರೂಪ ಬಹುಗಂಧ, ವಿವಿಧಮಯದ ಮೊಗ್ಗುಗಳು ಒಂದೆಡೆ ಅರಳುತ್ತಿವೆ. ಸದಾ ಉತ್ಸಾಹದ, ಕುತೂಹಲದ, ಪ್ರವೃತ್ತಿಯ ಪ್ರದರ್ಶನ. ಒಂದರೊಡನೊಂದು ಬೆಳೆಯುತ್ತವೆ, ನಗುತ್ತವೆ, ಅಳುತ್ತವೆ, ಹಾಡುತ್ತವೆ, ಆಡುತ್ತವೆ. ಒಂದೊಂದೂ ಒಂದೊಂದು ತೆರ, ನೂರುವಿಧ, ನೂರು ತೆರ ' ಆದರೂ ನಾವೆಲ್ಲ ಒಂದು ಎಂಬ ಮುದ ಅವುಗಳಿಗೆ. ಸಂಜೆ ಮುಂಜಾವುಗಳಲ್ಲಿ ಅವುಗಳೆಲ್ಲ ಒಂದೆಡೆ ಭಕ್ತಿಭಾವದಿಂದ ಸಮಾವೇಶಗೊಳ್ಳುತ್ತವೆ ತಮ್ಮ ಭವಿಷ್ಯವನ್ನು ಅರಳಿಸುವುದಕ್ಕಾಗಿಯೇ ಹಗಲಿರುಳು ಶ್ರಮಿಸುತ್ತಿರುವ 'ಮಹಾಚೈತನ್ಯದ' ಸನ್ನಿಧಿಯಲ್ಲಿ ಕುಳಿತು ಪ್ರಾರ್ಥನೆ ಮಾಡುತ್ತವೆ. ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳುವ ಗೀತಾ ಶ್ಲೋಕಗಳನ್ನು ಪಠಿಸುತ್ತವೆ. ಬಸವಾದಿ ಶರಣರ ಅನುಭಾವದ ವಚನಗಳನ್ನು ಹಾಡುತ್ತವೆ. ನಿಜಗುಣರ ಗೀತೆಗಳನ್ನು ಹೇಳುತ್ತವೆ, ತಾವು ಏನನ್ನು ಹಾಡುತ್ತಿದ್ದೇವೆ, ಪಠಿಸುತ್ತಿದ್ದೇವೆ' ಹೇಳುತ್ತಿದ್ದೇವೆ ಎಂಬುದರ ಅರ್ಥವನ್ನು ಇನ್ನೂ ಅವು ತಿಳಿಯದಾರವು. ಆದರೆ 'ಮಹಾ ಚೈತನ್ಯ ' ಕೈಗೊಂಡಿರುವ ಮಣಿಹದಲ್ಲಿ ಸಂಪೂರ್ಣ ಭಾಗಿಗಳು. ಹೃದ್ಗತವಾಗುತ್ತಿರುವ ಇಂದಿನ ಪ್ರಾರ್ಥನೆಯ ಎಲ್ಲ ಶ್ಲೋಕಗಳಲ್ಲವಾದರೂ, ಒಂದೆರಡಾದರೂ ಈ ಮೊಗ್ಗುಗಳ ಬಾಳನ್ನು ಅರಳಿಸದಿರಲಾರವು. ಮೊಗ್ಗುಗಳು ತಲೆಬಾಗಿ ಕಣ್ಮುಚ್ಚಿ, ಕೈ ಮುಗಿದು ಹಾಡುತ್ತಿರುವಾಗ ಸುತ್ತನಿಂತು ನೋಡುವ ಮನಸ್ಸುಗಳಿಗೆ ಅದೆಂಥ ಆನಂದ ! ಈ ಮೊಗ್ಗುಗಳು ಅರಳಬೇಕು ಸಮಾಜಕ್ಕೆ ತಮ್ಮ ಗಂಧ ಪರಿಮಳವನ್ನು ನೀಡಬೇಕು, ರಾಷ್ಟ್ರಕ್ಕೆ ಸೇವೆ ಸಲ್ಲಿಸಬೇಕು ಎಂಬ ಉದಾತ್ತ ಆದರ್ಶವನ್ನು ಆಶೀರ್ವಚನದ ಮೂಲಕ ಬೋಧಿಸುತ್ತಿರುವ ಪುಣ್ಯ ಮೂರ್ತಿಯ ದಿವ್ಯ ಸಂಕಲ್ಪ ಅನುಪಮವಾದುದು. ಅದಕ್ಕೆ ತಮ್ಮ " ಅಳಿಲು ಸೇವೆ ಮಳಲ ಭಕ್ತಿ " ಯನ್ನರ್ಪಿಸುತ್ತಿರುವ ಸಹೃದಯಗಳು ಸುತ್ತಲೂ ನಿಂತು ಉಸ್ತುವಾರಿ ಮಾಡುವ ಕೈಂಕರ್ಯ. ಯಾತ್ರಾರ್ಥಿಗಳಾಗಿ ಬಂದ ಭಾವುಕರಿಗೆ ಕ್ಷಣಕಾಲವಾದರೂ ದಿವ್ಯಾನುಭವನ್ನು ನೀಡುವ ಅಮೂಲ್ಯ ಕ್ಷಣಗಳು. ದೈನಂದಿನ ತಾಪತ್ರಯಗಳ ಜಂಜಡದಿಂದ ದೂರಾದೆವಲ್ಲ ಎಂಬ ಹಗುರಭಾವ " ದುಡಿದುಡಿದು ಸತ್ತಾಗ, ಆ ಮನಕೆ ಬೇಸತ್ತಾಗ, " ಹಿಗ್ಗು ನೀಡುವ ಪ್ರಶಸ್ತ ಸನ್ನಿವೇಶ.

ಮೊಗ್ಗುಗಳ ಶಿಕ್ಷಣ, ಸಾಧನೆ, ಇಲ್ಲಿ ನಡೆದಿದೆ. ಇಂದು ನಿನ್ನೆಯಿಂದಲ್ಲ. ಹಲವಾರು ದಶಕಗಳಿಂದ. ತಮ್ಮ ಜೀವಿತದ ಅತ್ಯಂತ ಸಂತೋಷದ ಅವಧಿಯನ್ನು ಅವು ಇಲ್ಲಿ ಕಳೆಯುತ್ತಿವೆ, ಹಲವು ಹನ್ನೊಂದು ಬಣ್ಣ, ಭಾವ, ಗಂಧ, ಗಳನ್ನು ಸಂಚಯಿಸಿ ಕೊಂಡು ಬೆಳೆಯುತ್ತಿವೆ. ಹತ್ತು ದಿಕ್ಕಿನಿಂದ ಬಂದಿವೆ, ಈ "ಪುಣ್ಯಪುರುಷನ' ತೋಟದಲ್ಲಿ ಇಂದು ಅರಳುತ್ತಿವೆ. ಒಂದು ಕಡೆ ಸೇರಿ ಹತ್ತು ಕಡೆಗೆ ಮುಖ ಮಾಡಿ ಅರಳುತ್ತಿವೆ. ಅರಿವು-ಮರೆವುಗಳ ಮಧ್ಯೆ ಗುರಿಯನ್ನು ಹುಡುಕುತ್ತ ನಡೆದಿವೆ. "ತನ್ನರಿವು ತನಗೆ ಗುರುವಾಗಬೇಕು" ಎಂಬ ಮಹಾ ವಾಕ್ಯವನ್ನು ಅರ್ಥಮಾಡಿ ಕೊಳ್ಳಲು "ಮೌನ ಸಂದೇಶ"ವನ್ನು ತೋಟದೊಡೆಯ ನೀಡುತ್ತಿರುವುದು ಅವುಗಳ ಭಾಗ್ಯವಾಗಿದೆ.

ನೋಡುವ ಕಣ್ಣು, ಪರಿಭಾವಿಸುವ ಹೃದಯವಿದ್ದರೆ ಮೊಗ್ಗುಗಳು ಅರಳುತ್ತಿರುವ ಸುಂದರ ದೃಶ್ಯ ಭಾಸವಾಗದಿರದು, ಎಷ್ಟು ಪುಣ್ಯ ಈ ಮೊಗ್ಗುಗಳದು !



ಬಡ ಪಶು ಪಂಕದಲ್ಲಿ ಬಿದ್ದೊಡೆ ಕಾಲ ಬಿಡುವುದಿಲ್ಲ ಜೀನೆಗಸಿಯುಂಟೆ ?  
ಶಿವ ಶಿವಾ! ಹೋದಹೆ ಪೋದಹೆನಯ್ಯಾ !  
ನಿಮು ಮನಸಹತ್ತ ಲೆನ್ನ ತೆಗೆಯಾರಯ್ಯಾ. !  
ಪಶುಪಾಸಂ ಪಶುಪತಿ ನೀನು !  
ತುಡುಗುಣಿಕೆಂಬುದು ಎನ್ನ ಹಿಡಿದು ಬಡಿಯುದ ಮುನ್ನ !  
ಒಡೆಯ, ನಿಮ್ಮ ಬಯ್ಕೆದಂತೆ ಮಾಡು.

ಕೂಡಲಸಂಗಮದೇವಾ.





## ಶ್ರೀ ಮಾದೇಶ್ವರರ ಕ್ಷೇತ್ರ (ಮಹದೇಶ್ವರ ಬೆಟ್ಟ)

ಪಂ॥ ಕೆ.ಪಿ. ಶಿವಲಿಂಗಯ್ಯ ಎಂ.ಎ,ಬಿ.ಇಡಿ,  
ಗೌ॥ ಕಾರ್ಯದರ್ಶಿ, ವಾಗ್ವಿಲಾಸ ಪ್ರಕಾಶನ 425/H 'ಕುಮಾರ ನಿಲಯ', ವಿಜಯನಗರ, ಬೆಂಗಳೂರು-40

ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನಲ್ಲಿ ಕರ್ನಾಟಕದ ದಕ್ಷಿಣ ಭಾಗದ ಪೂರ್ವ ಘಟ್ಟಗಳ ಮಧ್ಯೆ ಇರುವ ಮಾದೇಶ್ವರ ಕ್ಷೇತ್ರ ಆ ಮಹಾ ಮೂರ್ತಿಯ ಪಾದ ಧೂಳಿಯಿಂದ ಪವಿತ್ರವೆನಿಸಿದೆ. ಶರಣರು ಪಾದವಿಟ್ಟ ಸ್ಥಳವೇ ಅವಿಮುಕ್ತ ಕ್ಷೇತ್ರವೆಂದು ಪ್ರಖ್ಯಾತಿ ಹೊಂದುವುದು. ಕೊಳ್ಳೇಗಾಲದಿಂದ ಪೂರ್ವಾಭಿ ಮುಖವಾಗಿ ಮಧುವನಹಳ್ಳಿ, ಸಿಂಗಾನಲ್ಲೂರು, ಕಾಮಗೆರೆ, ಹನೂರು, ಅಜ್ಜೀಪುರ, ರಾಮಾಪುರ, ಕೌದಳ್ಳಿ – ಈ ಗ್ರಾಮಗಳ ಮಾರ್ಗವಾಗಿ ಈ ಬೆಟ್ಟಕ್ಕೆ ಹೋಗಬಹುದು. ಕೌದಹಳ್ಳಿಯಿಂದ ಮುಂದೆ ಸುಮಾರು ೧೦ ಮೈಲಿ ಪ್ರಯಾಣ ಮಾಡಿದರೆ ಬೆಟ್ಟದ ತಪ್ಪಲು ಸಿಕ್ಕುತ್ತದೆ. ಈ ತಪ್ಪಲಿಗೆ '**ತಾಳ ಬೆಟ್ಟ**' ಎಂದು ಕರೆಯುತ್ತಾರೆ. ಇಲ್ಲಿಂದ ಮಾದೇಶ್ವರ ಸ್ವಾಮಿ ದೇವಾಲಯಕ್ಕೆ 7-8 ಮೈಲಿಗಳ ದೂರದ ಎರಡು ದಾರಿಗಳಿವೆ. ಒಂದು ಬಸವನದಾರಿ ಇನ್ನೊಂದು ಸರ್ಪನದಾರಿ. ಬಸವನದಾರಿ ಸುಗಮ. ಸರ್ಪನ ದಾರಿ ಕಡಿದು. ಈಚೆಗೆ ಬೆಟ್ಟದ ಮೇಲಕ್ಕೆ ದೇವಾಲಯದವರೆಗೂ ಬಸ್ಸು - ಕಾರುಗಳು ಹೋಗಲು ಅವಕಾಶವಾಗುವಂತೆ ರಸ್ತೆ ವ್ಯವಸ್ಥೆ ಮಾಡಲಾಗಿದೆ.

ಮಾದೇಶ್ವರರ ಜೀವಿತ ಕಾಲದ ಬಗೆಗೆ ಖಚಿತವಾಗಿ ತಿಳಿದು ಬಂದಿಲ್ಲ. ಕಲ್ಯಾಣಕ್ಕೆ ಭೇಟಿಕೊಟ್ಟ ಬಸವೇಶ್ವರರ ದೃಢಭಕ್ತಿಯನ್ನು ಪರೀಕ್ಷಿಸಿದರೆಂದು ಒಂದು ಅಭಿಪ್ರಾಯ. ಬಸವಣ್ಣನವರೇ ಸ್ಥಾಪಿಸಿದ ಶೂನ್ಯಸಿಂಹಾಸನದ ೬ ನೆಯ ಪೀಠಾಧಿಕಾರಿಗಳಾದ ನಿರ್ಮಾಯ ಗಣೇಶ್ವರರೇ ಇವರು – ಎಂಬುವುದು ಇನ್ನೊಂದು ಅಭಿಪ್ರಾಯ. ೧೪-೧೫ ಶತಮಾನದಲ್ಲಿ ದಕ್ಷಿಣ ಕರ್ನಾಟಕದಲ್ಲಿ ತೊಳಗಿ ಬೆಳಗಿದ ಮಹಾಶರಣರಿವರೆಂದು ಬಹಳ ಜನ ವಿದ್ವಾಂಸರ ಅನಿಸಿಕೆ. ಮಾದೇಶ್ವರರನ್ನು ಕುರಿತಂತೆ ಪ್ರಚಲಿತವಿರುವ ಜನಪದ ಕಾವ್ಯ ಅಪಾರ. ಅದರಲ್ಲಿ "**ಕಂಸಾಳೆ**" ಬಾಜಿಸಿ ಕೊಂಡು ಹಾಡುವ ಪದಗಳೇ ಜಾಸ್ತಿ. ಕ್ರಿ. ಶ. ೧೭೫೦ ರ ಸುಮಾರಿನಲ್ಲಿದ್ದ '**ಮಿಣ್ಯ**'ದ ಗುರುಸಿದ್ಧ ಕವಿ ಮಾದೇಶ್ವರರ ಬಗೆಗೆ ಒಂದು ಸಾಂಗತ್ಯ ಕಾವ್ಯವನ್ನೇ ರಚಿಸಿದ್ದಾನೆ. ಇತ್ತೀಚೆಗೆ ಶ್ರೀ ಸಿದ್ಧಗಂಗಾ ಪ್ರೌಢ ಶಾಲೆಯಲ್ಲಿ ಉಪಾಧ್ಯಾಯರಾಗಿ ಕೆಲಸಮಾಡಿ ಇದೀಗ ಆಕಾಶವಾಣಿಯಲ್ಲಿ ಸೇವೆ ಸಲ್ಲಿಸುತ್ತಿರು ಡಾ॥ ಬಿ. ಎಸ್. ಸ್ವಾಮಿ ಅವರು ಸುಮಾರು ಒಂದ ಸಾವಿರ ಪುಟದ '**ಮಹಾ ಜ್ಯೋತಿ ಮಾದೇಶ್ವರ**' ಎಂಬ ಮಹಾ ಕಾದಂಬರಿಯನ್ನು ಬರೆದು ಪ್ರಕಟ ಪಡಿಸಿರುತ್ತಾರೆ. ಅಷ್ಟು ಮಾತ್ರವಲ್ಲದೆ ಶ್ರೀಯುತರು ಮಲೆ ಮಾದೇಶ್ವರರನ್ನು

ಆಳವಾಗಿ ಸಂಶೋಧನೆ ನಡೆಸಿ ಡಾಕ್ಟರೇಟ್ ಪದವಿಯನ್ನು ಪಡೆದಿರುತ್ತಾರೆ. ಅಂತೂ ಮಾದೇಶ್ವರರು ಏಳು ಮಲೆಯ ನಡುವೆ ನೆಲಸಿದ್ದು ಕರ್ನಾಟಕ ಮತ್ತು ತಮಿಳು ನಾಡಿನ ಭಕ್ತಕೋಟಿಗೆ ಆರಾಧ್ಯದೈವ ವೆನಿಸಿದ್ದಾರೆ. ಅನೇಕ ಪವಾಡಗಳನ್ನು ಮೆರೆದಿರುವರೆಂದು ಖ್ಯಾತಿ ಪಡೆದಿರುವ ಮಾದೇಶ್ವರರು ಒಬ್ಬ ಶ್ರೇಷ್ಠ ಶಿವಶರಣರು ಎನ್ನುವುದರಲ್ಲಿ ಸಂದೇಶವಿಲ್ಲ.

ಶ್ರೀಶೈಲ ಪರ್ವತ ಪ್ರಾಂತ್ಯದತ್ತಣಿಂದ ಪುಟ್ಟ ಬಾಲಕ ರೂಪಿನಿಂದ ಕರ್ನಾಟಕದ ದಕ್ಷಿಣ ಭಾಗಕ್ಕೆ ಬಂದರೆಂದು ಹೇಳಲಾದ **'ಮಾದಪ್ಪ'** ಸುತ್ತೂರು ಮಠದಲ್ಲಿ ಕಾಯಕಗೈದು ಅಲ್ಲಿನ ಗುರುಗಳ ಕೃಪೆಗೆ ಪಾತ್ರನಾಗಿ ಮುಂದೆ ಕುಂತೂರಿನ ಪ್ರಭು (ಲಿಂಗ) ಸ್ವಾಮಿಗಳವರಿಂದ **'ದೀಕ್ಷಾ ಸಂಸ್ಕಾರ'** ಪಡೆದು ಅಲ್ಲಿಂದ ಏಳು ಮಲೆಗೆ ದಯಮಾಡಿಸಿ ಅಲ್ಲಿ ಅನಾಗರಿಕರಾಗಿ ಜೀವಿಸುತ್ತಿದ್ದ ಗಿರಿಜನರನ್ನು ಉದ್ಧರಿಸಿ ಅವರನ್ನು ಸಂಸ್ಕಾರಿಗಳನ್ನಾಗಿ ಪರಿವರ್ತಿಸಿದ ಮಹಾನುಭಾವರೆಂದು ಸ್ಥೂಲವಾಗಿ ಅಭಿವ್ಯಕ್ತಗೊಳಿಸಬಹುದಾಗಿದೆ.

ಮಾದೇಶ್ವರರನ್ನು ಹುಡಿಕಿಕೊಂಡು ಕುಂತೂರು ಮಠದಿಂದ ಬಂದ ಶಾಂತಮಲ್ಲಿಕಾರ್ಜುನ ಸ್ವಾಮಿಗಳೇ ಇಲ್ಲಿನ ಸಾಲೂರು ಮಠದ 'ಮೂಲಿಗ' ರೆಂದೂ ಅವರಿಂದ ಹಾಗೂ ಅವರ ಅನಂತರದ ಮಠಾಧಿಪತಿಗಳಿಂದ ಬೆಟ್ಟದ ಜೀವಿಗಳಿಗೆ ಸುಸಂಸ್ಕಾರ ಕಾರ್ಯ ನಡೆದು ಅವರೆಲ್ಲ ಭಕ್ತರಾದರೆಂದು ತಿಳಿದು ಬರುತ್ತದೆ.

ಈ ಕ್ಷೇತ್ರವು ಸುಂದರ ಪ್ರಕೃತಿಯ ಮಧ್ಯೆ ಇದೆ. ದೇವಾಲಯಕ್ಕೆ ಹತ್ತಿರದಲ್ಲಿ ದೇವರಹಳ್ಳಿ ಇದೆ. ಇಲ್ಲಿ ದೇವಸ್ಥಾನದ ಅರ್ಚಕರು ವಾಸಿಸುತ್ತಾರೆ. ಇವರನ್ನು ತಮ್ಮಡಿಗಳೆಂದೂ ಕರೆಯುತ್ತಾರೆ. ಶಿವರಾತ್ರಿ, ಯುಗಾದಿ, ನವರಾತ್ರಿ, ದೀಪಾವಳಿ, ಹಬ್ಬಗಳಲ್ಲಿ ಹಾಗೂ ಪ್ರತಿ ಅಮಾವಾಸ್ಯೆಯಲ್ಲಿ ಇಲ್ಲಿ ಜಾತ್ರೆಗಳು (ಪರಸೆ) ನಡೆಯುತ್ತವೆ. ಈ ಕ್ಷೇತ್ರದಲ್ಲಿ ಸಾಲೂರು ಮಠ, ಶೇಷಣ್ಣೊಡೆಯರ ಸ್ಥಾನ, ಅಂತರಗಂಗೆ, ನಾಗಮಲೆ – ಮುಂತಾದ ಪ್ರಮುಖ ಸ್ಥಳಗಳಿವೆ. ಈ ಬೆಟ್ಟವನ್ನು ಹತ್ತುವಾಗ ಪರಸೆ (ಭಕ್ತ ವೃಂದ) **ಆನೆಮಲೆ, ಜೇನುಮಲೆ, ಕಾನಮಲೆ, ಗುತ್ತಮಲೆ, ಗುಂಜಿಮಲೆ, ಗುಲಗಂಜಿಮಲೆ, ಏಳುಮಲೆ, ಎಪ್ಪತ್ತೇಳು ಮಲೆಯಲ್ಲಿ ತಪ್ಪದೆ ನಾಟ್ಯವಾಡುವ ಮಾದೇಶ್ವರನ ಪಾದಕ್ಕೆ ಉಘೇ"** ಎಂದು ಮುಂತಾಗಿ ಜಯಘೋಷಮಾಡುತ್ತಾ ನಡೆಯುವುದು ವಾಡಿಕೆ. ಒಟ್ಟಿನಲ್ಲಿ ಇದೊಂದು 'ಮಹಾಶಿವಯೋಗಿ' ನೆಲಸಿರುವ ಪುಣ್ಯಕ್ಷೇತ್ರ.

( ಮುಂದುವರಿದಿದೆ )

# ಕೃಷಿಯಲ್ಲಿ ಮಹಿಳೆ

–ಡಿ. ವೆಂಕಟರಾವ್ ಎಂ.ಎ. ಪ್ರಾಚಾರ್ಯರು. ಚಂದನ . ಹಾಸನ.

**ಕನಿಷ್ಠ ಕೂಲಿಯ ಕಾಯಿದೆ:** ಕೃಷಿ ಕಾರ್ಯಕರ ಆರ್ಥಿಕ ಮಟ್ಟವನ್ನು ಸುಧಾರಿಸಲು ಭಾರತ ಸರಕಾರ 1948ರಿಂದಲೇ ಕನಿಷ್ಠ ಕೂಲಿ ಕಾಯಿದೆಯನ್ನು ಜಾರಿಗೆ ತಂದಿದೆ. ಇದರನ್ವಯ ಭಾರತದ ಎಲ್ಲಾ ರಾಜ್ಯ ಸರಕಾರಗಳಲ್ಲೂ 1950-70 ರ ಮಧ್ಯೆ ಕೃಷಿ ಕಾರ್ಮಿಕರಿಗೆ ಕನಿಷ್ಠ ಕೂಲಿಯನ್ನು ನಿಗದಿ ಮಾಡಲಾಗಿದೆ. ಆದರೆ ಈ ಕಾಯಿದೆಯಿಂದ ಕೃಷಿ ಕಾರ್ಮಿಕರಿಗೆ ಹೆಚ್ಚಿನ ಪ್ರಯೋಜನವೇನೂ ಆಗಿಲ್ಲ. ಕೂಲಿ ದರಗಳು ತೀರಾ ಕಡಿಮೆ ಇರುವ ಪ್ರದೇಶಗಳಲ್ಲಿ ಹಾಗೂ ಕಾರ್ಮಿಕರ ಸಂಘಗಳಿಲ್ಲದ, ಒಂದು ವೇಳೆ ಇದ್ದರೂ ಸುಸ್ಥಿತಿಯಲ್ಲಿಲ್ಲದ ಪ್ರದೇಶಗಳಲ್ಲಿ ಕನಿಷ್ಠ ಕೂಲಿಯನ್ನು ನೀಡಲಾಗಿದೆ, ಇದಕ್ಕನುಸಾರವಾಗಿ ಹೆಣ್ಣಾಳುಗಳು ಅವರ ಜೀವನಕ್ಕೆ ಸಾಕಾಗುವಷ್ಟರ ಮಟ್ಟಿಗೆ ಕೂಲಿಪಡೆಯಲು ಅರ್ಹರಾಗಿದ್ದಾರೆ ಆದರೆ ಇವುಗಳ ಕಾರ್ಯಾಚರಣೆ ಕೇವಲ ಕನಸೇ ಆಗಿ ಉಳಿದಿದೆ.

ಮೊದಲನೆಯದಾಗಿ ಕೃಷಿ ಕೂಲಿಯನ್ನು ನಿಗದಿ ಮಾಡುವುದೇ ಬಹಳ ಪ್ರಯಾಸದ ಕೆಲಸ. ಈ ದಿಸೆಯಲ್ಲಿ ಉತ್ಪಾದನಾ ಕಾರ್ಯದ ಆಯವ್ಯಯಗಳು, ಆ ಪ್ರದೇಶದ ಬೆಳೆಗಳು, ಸಂಬಂಧಿಸಿದ ಉತ್ಪಾದನಾಂಗಗಳು ಮತ್ತು ಅದಕ್ಕೆ ತಗಲುವ ಖರ್ಚು, ಉತ್ಪನ್ನದ ಮಟ್ಟ ಹಾಗೂ ಅವಕ್ಕೆ ದೊರೆಯಬಹುದಾದ ಬೆಲೆ ಇತ್ಯಾದಿ ಅಂಶಗಳ ಬಗ್ಗೆ ಮಾಹಿತಿ ಅವಶ್ಯ. ಇದು ಬಹಳ ಕಷ್ಟದ ಕೆಲಸ. ಕೂಲಿದರ ಹಾಗೂ ಉತ್ಪನ್ನದ ಬೆಲೆ ಈ ಎರಡೂ ಪರಸ್ಪರ ಹೊಂದಿಕೊಳ್ಳಬೇಕು. ಆದರೆ ಉತ್ಪನ್ನಕ್ಕೆ ದೊರೆಯುವ ಬೆಲೆ ತಿಳಿಯುವುದು ಕಾರ್ಯಕರ್ತರನ್ನು ನೇಮಿಸಿಕೊಂಡು, ಉತ್ಪಾದನೆ ಮಾಡಿ, ಉತ್ಪಾದನಾ ವಸ್ತುಗಳನ್ನು ಮಾರಾಟ ಮಾಡಿದಾಗಲೇ. ಅಂದರೆ, ಕೃಷಿ ಉತ್ಪನ್ನಗಳ ಬೆಲೆಯನ್ನು ನಿಗದಿಪಡಿಸಿದ ಹೊರತು ಕನಿಷ್ಠ ಕೂಲಿಯನ್ನು ನಿಗದಿಪಡಿಸುವುದು ಸಾಧ್ಯವಿಲ್ಲ. ಉತ್ಪಾದನಾ ವೆಚ್ಚ ಹಾಗೂ ಇಳುವರಿಯ ಮಟ್ಟಗಳನ್ನು ಕಂಡು ಹಿಡಿಯುವುದೂ ಕಷ್ಟದ ಕೆಲಸವೇ. ಏಕೆಂದರೆ, ಒಣ ಕೃಷಿ ಮತ್ತು ನೀರಾವರಿ ಕೃಷಿಗಳಲ್ಲಿ ಈ ಎರಡೂ ಅಂಶಗಳು ಭಿನ್ನವಾಗಿರುತ್ತವೆ.

ಕೃಷಿಯಲ್ಲಿ ಕನಿಷ್ಠ ಕೂಲಿಯನ್ನು ನಿಗದಿ ಮಾಡುವಲ್ಲಿ ಇರುವ ಮತ್ತೊಂದು ಮುಖ್ಯ ತೊಂದರೆ ಎಂದರೆ, ಕೃಷಿ ಕೂಲಿಯನ್ನು ಕೇವಲ ಹಣವೇ ಅಲ್ಲದೆ ಧಾನ್ಯ ಮತ್ತಿತರ ರೂಪಗಳಲ್ಲೂ ನೀಡುವುದು. ಸಾಮಾನ್ಯವಾಗಿ ಬೆಲೆಗಳು ಏರುತ್ತಿದ್ದು



ಮಾರುಕಟ್ಟೆಯಲ್ಲಿ ಆಹಾರ ಧಾನ್ಯಗಳು ದೊರೆಯದಿದ್ದಾಗ ಮಹಿಳಾ ಕಾರ್ಮಿಕರು ತಮ್ಮ ಕೂಲಿಯನ್ನು ಧಾನ್ಯದ ರೂಪದಲ್ಲಿ ಪಡೆಯಬಯಸುತ್ತಾರೆ. ಮಾರುಕಟ್ಟೆಯಲ್ಲಿ ಆಹಾರ ಧಾನ್ಯಗಳ ಬೆಲೆಗಳು ಇಳಿಮುಖವಾಗಿ ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತಿದ್ದರೆ ಅವರ ಕೃಷಿ ಕೂಲಿಯನ್ನು ಹಣದ ರೂಪದಲ್ಲಿ ಪಡೆಯಲಿಚ್ಛಿಸುತ್ತಾರೆ. ಈ ರೀತಿ ಕೂಲಿಯನ್ನು ಕೇವಲ ಹಣದ ಮೂಲಕವೇ ನೀಡುವುದಿಲ್ಲವಾದ್ದರಿಂದ ಕಾನೂನಿನ ಮೂಲಕ ಕನಿಷ್ಠ ಕೂಲಿಯನ್ನು ಜಾರಿಗೆ ತರುವುದು ಕಷ್ಟವಾಗಿದೆ. ಜಾರಿಗೆ ತಂದರೂ ಅವಿದ್ಯಾವಂತರಾದ ಗ್ರಾಮೀಣ ಮಹಿಳೆಯರಿಗೆ ಇದರ ಬಗ್ಗೆ ತಿಳಿಯುವುದೂ ಕಷ್ಟ. ಇದಕ್ಕೆ ಸೂಕ್ತ ಮೇಲ್ವಿಚಾರಣೆ ಅಗತ್ಯ. ಅದರೆ ದುಬಾರಿ ಖರ್ಚು ತಗಲುವ ಇದು ಸುಲಭದ ಕೆಲಸವಲ್ಲ. ಹೀಗಾಗಿ, ಈ ಕಾಯಿದೆಯು ಒಂದು ಕಾಗದದ ಕಾನೂನಾಗಿ ಪರಿಣಮಿಸಿದೆಯೇ ಹೊರತು ಮಹಿಳಾ ಕಾರ್ಮಿಕರ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಸಮರ್ಥವಾಗಿಲ್ಲ. ಈ ಕಾಯಿದೆಯ ಸಮರ್ಪಕ ಅನುಷ್ಠಾನಕ್ಕೆ ಯಾರೂ ಗಮನವಿತ್ತಿಲ್ಲ. ಮಹಿಳಾ ಕೃಷಿ ಕಾರ್ಮಿಕರ ನಿರಂತರ ಶೋಷಣೆ ಇನ್ನೂ ಜೀವಂತವಾಗಿರುವುದೇ ಇದಕ್ಕೆ ಸಾಕ್ಷಿ. ಮಹಿಳಾ ಕೃಷಿ ಕಾರ್ಮಿಕರು ಸ್ವಲ್ಪ ಮಟ್ಟಿಗಾದರೂ ಆರ್ಥಿಕವಾಗಿ ಸಬಲರಾಗಿ ಹೊಸ ಉತ್ಸಾಹ, ಹುಮ್ಮಸ್ಸುಗಳಿಂದ ಮುಂದುವರಿಯಬೇಕಾದರೆ ಉತ್ಪನ್ನದ ಏರಿಕೆಗೆ ಅನುಗುಣವಾಗಿ ಕೂಲಿದರವೂ ಹೆಚ್ಚಬೇಕು. ಈ ದಿಸೆಯಲ್ಲಿ ಪದಾರ್ಥಗಳ ಬೆಲೆ ಮಟ್ಟಗಳಿಗೆ ಅನುಗುಣವಾಗಿ ಕನಿಷ್ಠ ಕೂಲಿಯನ್ನು ಕಾಲ ಕಾಲಕ್ಕೆ ಪರಿಷ್ಕರಿಸಬೇಕು. ಮಹಿಳಾ ಕೃಷಿಕಾರ್ಮಿಕರಿಗೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಸಂಗ್ರಹಿಸಿ, ಅವುಗಳ ಆಧಾರದ ಮೇಲೆ ಅವರ ಉದ್ಧಾರವನ್ನು ಪರಿಶೀಲಿಸಬೇಕು ಆಸಕ್ತಿ ಶ್ರದ್ಧೆಗಳಿಂದ ಈ ಕಾರ್ಯಗಳು ನಡೆಯಬೇಕು. ಸ್ವಲ್ಪ ಅಲಕ್ಷ್ಯ ತೋರಿದರೂ ಮಹಿಳಾ ಕೃಷಿ ಕಾರ್ಮಿಕರು ಶೋಷಿತ ಬಡತನದ ಸಾಕಾರ ರೂಪಗಳಾಗಿಯೇ ಮುಂದುವರಿದಾದರು. ಆದ್ದರಿಂದ ಸರಕಾರ ತಾನು ಮಾಡುವ ಕಾಯಿದೆಯ ಫಲವು ನೇರವಾಗ ಮಹಿಳಾ ಕೃಷಿ ಕಾರ್ಮಿಕರಿಗೆ ತಲಪುವಂತೆ ವ್ಯವಸ್ಥೆ ಮಾಡುವುದು ಒಳಿತು. ದೊಡ್ಡ ದೊಡ್ಡ ಹಿಡುವಳಿಗಳಿರುವ ಆಢ್ಯರು ಮಹಿಳಾ ಕೃಷಿ ಕಾರ್ಮಿಕರನ್ನು ಕಡಿಮೆ ಕೂಲಿಗೆ ದಿನವಿಡೀ ದುಡಿಸಿ ಆರ್ಥಿಕ ಲಾಭ ಸಂಪಾದಿಸುತ್ತಿರುವಾಗ ಸರಕಾರ ಗ್ರಾಮೀಣ ಮಹಿಳಾ ಕಾರ್ಮಿಕರನ್ನು ಶ್ರದ್ಧೆಯಿಂದ ಕಾಪಾಡಿ, ಅವರ ಜೀವನವನ್ನು ಉತ್ತಮಪಡಿಸಲೇಬೇಕು. ಈ ದೃಷ್ಟಿಯಿಂದ ಸಾಂಪ್ರದಾಯಿಕ ವಿಧಾನಗಳಿಗೆ ಶರಣು ಹೋಗದೆ ನವೀನ ವಿಧಾನವನ್ನು ಅನುಸರಿಸಬೇಕಾದ್ದು ಅಗತ್ಯ. ಮಹಿಳಾ ಕಾರ್ಮಿಕರ ಬದುಕಿನ ಸುಧಾರಣೆಯಲ್ಲಿ ಕೂಲಿಯ ಪಾತ್ರ ಬಹಳ ಹಿರಿದಾದುದು. ಆದ್ದರಿಂದ ಅದನ್ನು ವ್ಯವಸ್ಥಿತ ರೀತಿಯಲ್ಲಿ ಕಡ್ಡಾಯವಾಗಿ ಕಾರ್ಯರೂಪಕ್ಕಿಳಿಸಿ ಕಾಯಿದೆ ಅನ್ವಯ ಅಗತ್ಯವಾದ ಆಡಳಿತ ಯಂತ್ರವನ್ನು ರಚಿಸಬೇಕಾದುದು

ಸರಕಾರದ ಕರ್ತವ್ಯ. ಕನಿಷ್ಠ ಕೂಲಿಯನ್ನು ಕೊಡದ ಭೂ ಮಾಲೀಕರನ್ನು ಹಿಡಿದು ಶಿಕ್ಷಿಸಬೇಕು. ಅವಿದ್ಯಾವಂತರಾದ ಮಹಿಳಾ ಕೃಷಿ ಕಾರ್ಮಿಕರಿಗೆ ಕನಿಷ್ಠ ಕೂಲಿ ಕಾಯಿದೆಯ ಸರಿಯಾದ ತಿಳುವಳಿಕೆ ನೀಡುವ ಪ್ರಚಾರ ಕಾರ್ಯಕೈಗೊಳ್ಳಬೇಕು. ಕನಿಷ್ಠ ಕೂಲಿಯನ್ನು ಎಲ್ಲಾ ಜಿಲ್ಲೆಗಳಲ್ಲಿಯೂ ಜಾರಿಗೆ ತರಲಾಗಿದೆಯೇ, ಅವಕ್ಕೆ ಪ್ರೇರಕವಾದ ಕಾರ್ಯಗಳಲ್ಲಿ ಪ್ರಗತಿಯನ್ನು ಸಾಧಿಸಲಾಗುತ್ತಿದೆಯೇ ಎಂಬ ಬಗ್ಗೆ ಸರ್ಕಾರ ಸೂಕ್ತ ಗಮನ ಕೊಡಬೇಕು. ಯಾವ ಬಗೆಯ ಪ್ರಭಾವ ಪ್ರಲೋಭನೆಗೂ ಒಳಗಾಗದೆ ಹಳ್ಳಿಗಳಲ್ಲಿನ ಗುಂಪುಗಾರಿಕೆ ಹಾಗೂ ರಾಜಕೀಯ ಒಳ ಪಂಗಡಗಳ ಜಗಳಗನ್ನು ಮೆಟ್ಟಿ ಮಹಿಳಾ ಕಾರ್ಮಿಕರನ್ನು ಅನ್ಯಾಯದ ದವಡೆಯಿಂದ ರಕ್ಷಿಸಲು ಪ್ರಯತ್ನಿಸಬೇಕು. ಇದೆಲ್ಲದರ ಜೊತೆಗೆ ಸಾಮೂಹಿಕ ಚೌಕಾಸಿ ವ್ಯವಸ್ಥೆ ಜಾರಿಗೆ ಬರಬೇಕು. ಸರಕಾರ ಕೃಷಿ ಕಾರ್ಮಿಕ ಸಂಘಗಳ ರಚನೆಗೆ ಪ್ರೋತ್ಸಾಹ ನೀಡಬೇಕು. ಆಗಲೇ ಕೃಷಿ ಕಾರ್ಮಿಕರ ಶೋಷಣೆಗೆ ಕತ್ತರಿಹಾಕಿದಂತಾಗುತ್ತದೆ.

ಮಹಿಳಾ ಕೃಷಿ ಕಾರ್ಮಿಕರಿಗೆ ಮುಖ್ಯವಾಗಿ ಬೇಕಾಗಿರುವುದು ಪೂರ್ಣಕಾಲದ ಉದ್ಯೋಗ. ಇದು ದೊರೆತು ಅದರಿಂದ ಹೆಚ್ಚಿನ ವರಮಾನ ದೊರೆತಲ್ಲಿ ಅವರ ಉದ್ಧಾರ ಅತಿ ಸುಲಭ. ಆದರೆ, ಕೇವಲ ಕೃಷಿ ಕೇತ್ರದಲ್ಲೇ ಇವರಿಗೆಲ್ಲಾ ಉದ್ಯೋಗ ದೊರೆಯಬೇಕೆಂದರೆ ಅಸಾಧ್ಯ. ಆದ್ದರಿಂದ ಕೃಷಿಯೇತರ ಕ್ಷೇತ್ರಗಳಲ್ಲಿ ಇವರಿಗೆ ಸಾಕಷ್ಟು ಉದ್ಯೋಗಗಳನ್ನು ನಿರ್ಮಿಸಬೇಕು. ಆದ್ದರಿಂದ ರಸ್ತೆಗಳ ನಿರ್ಮಾಣ ಮೊದಲಾದ ಸಾರ್ವಜನಿಕ ಕಾರ್ಯಗಳನ್ನು ಕೈಗೊಂಡು, ಅವುಗಳಲ್ಲಿ ನಿರುದ್ಯೋಗಿ ಮಹಿಳಾ ಕಾರ್ಮಿಕರನ್ನು ನೇಮಿಸಿಕೊಳ್ಳುವ ಮೂಲಕ ಅವರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಲಾಗುತ್ತಿದೆ.

ಇತ್ತೀಚೆಗೆ ಜಾರಿಗೆ ಬಂದಿರುವ ಕೆಲವು ಕಾನೂನುಗಳ ಫಲವಾಗಿ ಗ್ರಾಮೀಣ ಮಹಿಳೆಯರ ದುಡಿಮೆ ಮತ್ತು ಆಸ್ತಿ ಇವುಗಳಿಗೆ ಒಂದು ನಿರ್ದಿಷ್ಟ ಸ್ವರೂಪ ದೊರೆಯುತ್ತಿದೆ. ಗ್ರಾಮೀಣ ಮಹಿಳೆಯರ ಸ್ಥಿತಿಯನ್ನು ಸುಧಾರಿಸಲು 1951 ರ ಸಮಾನ ವೇತನ ಕಾನೂನು ಮತ್ತು 1955 ರ ಹಿಂದು ವಿವಾಹ ಮತ್ತು ಆಸ್ತಿ ಕಾನೂನುಗಳನ್ನು ಭಾರತ ಸರಕಾರ ಜಾರಿಗೆ ತಂದಿದೆ. ಭಾರತದ ರಾಜ್ಯಾಂಗದ 39 ನಿಯಮದ ಪ್ರಕಾರ ಒಂದೇ ಬಗೆಯ ಕೆಲಸ ಕಾರ್ಯಗಳನ್ನು ಮಾಡುವ ಸ್ತ್ರೀ ಪುರುಷರರಿಗೆ ಯಾವ ರೀತಿಯಲ್ಲೂ ವ್ಯತ್ಯಾಸ ಉಂಟಾಗ ಬಹುದು. ಇದಲ್ಲದೆ, ರಾಜ್ಯಾಂಗದ 46 ನೆ ವಿಧಿಯ ಪ್ರಕಾರವೂ ಹಿಂದುಳಿದ ವರ್ಗಗಳ ಸ್ತ್ರೀಯರಿಗೆ ರಕ್ಷಣೆ ದೊರೆಯುತ್ತದೆ. ಗ್ರಾಮೀಣ ಮಹಿಳೆಯರನ್ನು ಸುಶಿಕ್ಷಿತರನ್ನಾಗಿಸುವ ಜವಾಬ್ದಾರಿಯನ್ನೂ ಸಾಮಾಜಿಕ ಶಿಕ್ಷಣ ಸಂಸ್ಥೆಗಳು ಸ್ವಲ್ಪ ಮಟ್ಟಿಗೆ ನಿರ್ವಹಿಸುತ್ತಿವೆ, ರಾತ್ರಿ ಶಾಲೆಗಳಲ್ಲಿ ಮಹಿಳೆಯರಿಗೆ ಅಕ್ಷರಗಳನ್ನು ಕಲಿಸಿ ಹೆಚ್ಚು ಜಾಗೃತರನ್ನಾಗಿ



ಮಾಡುವ ಕೆಲಸ ನಡೆದಿದೆ. ಕುಟುಂಬ ಯೋಜನೆ, ಪ್ರಜಾ ಪ್ರಭುತ್ವ ಇವುಗಳ ಬಗ್ಗೆ ಗ್ರಾಮೀಣ ಮಹಿಳೆಯರಿಗೆ ತಿಳಿ ಹೇಳಿ, ಅವರ ಸುಪ್ತ ಶಕ್ತಿಯ ಬಗೆ ಅರಿವು ಮೂಡಿಸಲು ಈಗ ಅನೇಕ ಪ್ರಯತ್ನಗಳು ನಡೆದಿವೆ.

ಹೀಗೆ ಮಹಿಳಾ ಕೃಷಿಕಾರ್ಮಿಕರ ಕಲ್ಯಾಣಕ್ಕಾಗಿ ಸರಕಾರ ಕೆಲವಾರು ಕ್ರಮಗಳು ಅಸ್ತಿತ್ವದಲ್ಲಿದ್ದರೂ ಆ ದಿಸೆಯಲ್ಲಿ ಹೆಚ್ಚಿನ ಪ್ರಗತಿ ಸಾಧಿಸಲಾಗಿಲ್ಲ. ಇವರಿಗೆ ಅನ್ಯಾಯವಾಗುವುದು ತಪ್ಪಿಲ್ಲ. ಈ ಕ್ರಮಗಳ ಬಗೆಗೆ ಅರಿವಿಲ್ಲದ ಗ್ರಾಮೀಣ ಮಹಿಳಾ ಕಾರ್ಮಿಕರ ಮೌಢ್ಯದ ದುರ್ಲಾಭವನ್ನು ಬಲ್ಲಿದರು ಚೆನ್ನಾಗಿ ಪಡೆಯುತ್ತಿದ್ದಾರೆ. ಕೃಷಿ ಅಭಿವೃದ್ಧಿ ಯೋಜನೆಯಿಂದ ಮಹಿಳಾ ಕೃಷಿ ಕಾರ್ಮಿಕರ ಹೆಚ್ಚುವರಿ ವೇತನ, ಅಧಿಕ ಉದ್ಯೋಗಗಳ ಕಲ್ಪನೆ ಉಂಟಾಗಿ ಸ್ವಲ್ಪ ಮಟ್ಟಿಗೆ ಅವರ ಆರ್ಥಿಕ ಸ್ಥಿತಿಯಲ್ಲಿ ಸುಧಾರಣೆ ಕಂಡು ಬಂದಿದ್ದರೂ ಅಸಮಾನ ವಿತರಣೆ, ಕೃಷಿ ಕ್ರಮಗಳ ಕಾರ್ಯಕ್ರಮದಲ್ಲಿ ವಿಳಂಬ ಇತ್ಯಾದಿಗಳಿಂದ ಹೆಚ್ಚಿನ ಯಶಸ್ಸನ್ನು ಸಾಧಿಸುವುದು ಕಷ್ಟವಾಗಿದೆ. ಇಂದಿನ ಹಣದ ವಾಸ್ತವ ಮೌಲ್ಯವು ಹಣದುಬ್ಬರದ ಪರಿಸ್ಥಿತಿಯಿಂದ ದಿನೇ ದಿನೇ ಕುಗ್ಗುತ್ತಿರುವುದರಿಂದ ಮಹಿಳಾ ಕೃಷಿ ಕಾರ್ಮಿಕರ ವಾಸ್ತವ ಮೌಲ್ಯವೂ ಕುಗ್ಗುತ್ತಿದೆ. ದೊರೆಯುವ ಕೂಲಿಯೂ ಕಡಿಮೆ. ಅದರಲ್ಲೂ ಈ ಪರಿಸ್ಥಿತಿ, ಹೀಗಾಗಿ ಜೀವನ ನಿರ್ವಹಣೆಯ ಸಮಸ್ಯೆ ಜಟಿಲ ರೂಪವನ್ನು ತಾಳುತ್ತಿದೆ. ರಾಷ್ಟ್ರದ ಕೆಲವು ಭಾಗಗಳಲ್ಲಿ ಅಭಿವೃದ್ಧಿಯ ವೇಗವು ಕುಂಠಿತಗೊಂಡಿರುವುದರಿಂದ ಆ ಭಾಗಗಳಲ್ಲಿನ ಮಹಿಳಾ ಕೃಷಿ ಕಾರ್ಮಿಕರ ಪರಿಸ್ಥಿತಿ ಶೋಚನೀಯವಾಗಿದೆ. ಈ ದಿಸೆಯಲ್ಲಿ ಸರಕಾರದ ಕ್ರಮಗಳ ಅನುಷ್ಠಾನತೆಯ ನೀತಿಯಲ್ಲಿ ಏಕರೂಪತೆ ಇಲ್ಲದಿರುವುದು ಒಂದು ಮುಖ್ಯ ದೋಷವಾಗಿದೆ. ಕೃಷಿ ಕೂಲಿ ಮಾಡುವ ಮಹಿಳೆಯರಿಗೆ ಕೂಲಿ ಹೆಚ್ಚಾಗ ಬೇಕಾದರೆ ಅವರು ಗೌರವಯುತವಾಗಿ ಕೆಲಸ ಮಾಡುವ ವಾತಾವರಣ ನಿರ್ಮಾಣವಾಗ ಬೇಕಾದರೆ ಎಲ್ಲ ಕೃಷಿ ಕಾರ್ಮಿಕರ ಸಂಘಟನೆ ಮತ್ತು ಹೋರಾಟವಲ್ಲದೆ ಬೇರೆ ದಾರಿ ಇಲ್ಲ. ಇಂದು ದೇಶದಲ್ಲಿ ಕೃಷಿ ಕಾರ್ಮಿಕರಿಗಾಗಿಯೇ ಕೆಲವು ಸಂಘಗಳು ಹುಟ್ಟಿಕೊಂಡಿವೆ. ಉದಾಹರಣೆಗೆ, ಕಮ್ಯೂನಿಸ್ಟ್ ಪಕ್ಷದ ಅಖಿಲ ಭಾರತ ಕಿಸಾನ್ ಸಭಾ, ಇಂಟಕ್‌ನ ರಾಷ್ಟ್ರೀಯ ಗ್ರಾಮೀಣ ಕಾರ್ಮಿಕರ ಸಂಘ ಮತ್ತು ಇತರ ಸ್ಥಳೀಯ ಸಂಘ-ಸಂಸ್ಥೆಗಳು. ಈ ಸಂಘಗಳ ಒಟ್ಟು ಸದಸ್ಯಬಲ 30 ಲಕ್ಷ ಇದ್ದು, ಒಟ್ಟು ಕೃಷಿ ಕಾರ್ಮಿಕರ ಬಲದಲ್ಲಿ ಈ ಸಂಘಗಳ ಸದಸ್ಯ ಬಲ ಕೇವಲ ಶೇಕಡ 5ರಷ್ಟು ಎಂದು ತಿಳಿದು ಬಂದಿದೆ. ಇದರಿಂದ ಕೃಷಿ ಕಾರ್ಮಿಕ ಸಂಘಟನೆಯು ನಮ್ಮ ದೇಶದಲ್ಲಿ ಎಷ್ಟು ದುರ್ಬಲವಾಗಿದೆ ಎಂಬುದು ತಿಳಿಯುತ್ತದೆ. ಇದರಿಂದಾಗಿಯೇ ಕೈಗಾರಿಕಾ ಕಾರ್ಮಿಕರಿಗಿರುವ ಯಾವ ಸಾಮಾಜಿಕ ಭದ್ರತೆಯ ಸೌಲಭ್ಯಗಳೂ ಕೃಷಿ ಕಾರ್ಮಿಕರಿಗೆ ಇಲ್ಲದಂತಾಗಿವೆ.

ಯಾವುದೇ ಸಂಘದ ಚಟುವಟಿಕೆಗೂ ಅದರ ಸದಸ್ಯ ಬಲ ಅಗತ್ಯ. ಆದರೆ ಕೃಷಿ ಕ್ಷೇತ್ರದಲ್ಲಿ ಈ ಬಲವನ್ನು ಆಶಿಸುವುದು ನಿಷ್ಫಲ. ಇದಕ್ಕೆ ಮುಖ್ಯ ಕಾರಣ ಕೃಷಿ ಕಾರ್ಮಿಕರ ಆರ್ಥಿಕ ಹಿನ್ನಡೆ, ಹಾಗೂ ಹಳ್ಳಿ ಹಳ್ಳಿಗಳಲ್ಲೂ ಸುತ್ತಾಡಿ ಕಾರ್ಮಿಕರನ್ನು ಸಂಘಟಿಸುವ ನಾಯಕರ ಅಭಾವ. ರೈತ ಸಂಘಗಳೂ ಕೃಷಿ ಕಾರ್ಮಿಕರ ಹಾಗೂ ಕೃಷಿ ಕೆಲಸ ಮಾಡುವ ಮಹಿಳೆಯರ ಸಮಸ್ಯೆಗೆ ಅಷ್ಟಾಗಿ ಗಮನ ಕೊಟ್ಟಿಲ್ಲ. ಎಸ್ಟೇಟುಗಳಲ್ಲಿ, ಅಣೆಕಟ್ಟು ನೀರಾವರಿ ಪ್ರದೇಶಗಳಲ್ಲಿ ದುಡಿಯುವ ಕೃಷಿ ಕಾರ್ಮಿಕರು ಕೆಲಸವಿದ್ದ ಕಡೆಗೆ ಹರಿದು ಹಂಚಿ ಹೋಗುವುದರಿಂದ ಅವರನ್ನು ಸಂಘಟಿಸುವ ಕೆಲಸ ಕಷ್ಟ. ಆದರೆ. ಒಮ್ಮೆ ಅವರನ್ನು ಸಂಘಟಿಸಿ ಚಳುವಳಿಯ ಬಗ್ಗೆ ಸಳೆದರೆ ಸಾಕು. ಅವರ ಸಮಸ್ಯೆಗಳೂ ತಾವಾಗಿಯೇ ಗಮನ ಪಡೆಯುತ್ತವೆ. ಆಗ ಕೃಷಿ ಕೆಲಸ ಮಾಡುವ ಮಹಿಳೆಯರ ಸಮಸ್ಯೆಗಳಿಗೂ ಪರಿಹಾರ ದೊರಕಿದಂತಾಗುತ್ತಗುತ್ತದೆ. ಇತ್ತೀಚೆಗೆ, ರೈತ ಕುಟುಂಬಗಳ ಹೆಣ್ಣು ಮಕ್ಕಳು ರೈತ ಸಂಘದ ಹೋರಾಟಗಳಲ್ಲಿ ಭಾಗವಹಿಸುತ್ತಿರುವವರಾದರೂ ಈ ಸಂಖ್ಯೆ ಇನ್ನು ಬಹಳ ಕಡಿಮೆ ಎಂದೇ ಹೇಳ ಬೇಕು. ಸಾಮಾಜಿಕ ಕಟ್ಟು ಪಾಡುಗಳು. ಮನೆಗೆಲಸದ ಹೊರೆ, ಗಂಡಸರ ಆಧಿಪತ್ಯಅವರದ್ದೇ ಆದ ಸಂಕೋಚದ, ಬಿಗುಮಾನದ, ಹೆದರಿಕೆಯ, ನಾಚಿಕೆಯ ಸ್ವಭಾವ ಇವುಗಳಿಂದಾಗಿ ಅವರು ಇನ್ನೂ ಸಂಘಟನೆಯೊಳಗೆ ಬರಲಾಗಿಲ್ಲ. ಮಹಿಳಾ ಕೃಷಿ ಕಾರ್ಮಿಕರು ಸಂಘಟನೆ ಗೊಳ್ಳಲು ಮತ್ತೊಂದು ಅಡ್ಡಿ ಎಂದರೆ ನಮ್ಮ ಕಾರ್ಮಿಕ ಸಂಘಗಳ ರಚನಾ ವಿಧಾನ ಮತ್ತು ಸಂಘಟನೆಯ ಸುಳಿವನ್ನು. ಇವರಲ್ಲಿ ಕಂಡೊಡನೆ ಇವರನ್ನು ಬಗ್ಗು ಬಡಿಯುವ ಬಲ್ಲಿವರ ಬುದ್ಧಿವಂತಿಕೆ, ಮಹಿಳೆಯರನ್ನು ಸಂಘಟನೆಯೊಳಗೆ ಪೂರ್ಣವಾಗಿ ಕರದ ಹೊರತು ಯಾವ ರೈತ ಚಳುವಳಿಯೂ ಯಶಸ್ವಿಯಾಗುವುದಿಲ್ಲ.

ಇಂದು ಭಾರತ ಕೃಷಿ ಕ್ಷೇತ್ರದಲ್ಲಿ ಸಾಧಿಸಿರುವ ಬೆಳವಣಿಗೆಗೆ ಮಹಿಳಾ ಕೃಷಿ ಕಾರ್ಮಿಕರ ಕೊಡುಗೆ ಅಪಾರ ಹಾಗು ವೈಶಿಷ್ಟ್ಯ ಪೂರ್ಣ. ಕುಟುಂಬಕ್ಕೆ ಹಾಗು ದೇಶಕ್ಕೆ ಸಾರ್ವತ್ರಿಕವಾಗಿ ದುಡಿದು ಸೇವೆ ಸಲ್ಲಿಸುವ ಇವರ ಕಾರ್ಯ ಅಮೋಘ. ಇವರ ಉದ್ಧಾರ ವಾಗದ ಹೊರತು ದೇಶದ ಉದ್ಧಾರ ಅಸಾಧ್ಯ. ಆದ್ದರಿಂದ ಇವರ ದುರಂತ ಮಯ ಜೀವನ ಪರಿಸ್ಥಿತಿಯಲ್ಲಿ ಸುಧಾರಣೆ ತರಲೂ ಸರಕಾರ ಇವರತ್ತ ಹೆಚ್ಚಿನ ಗಮನ ಹರಿಸಬೇಕಾಗಿದೆ. ಊಟ, ವಸತಿಗೆ ಬೇಕಾದ ಕನಿಷ್ಠ ಸೌಲಭ್ಯಗಳನ್ನು ಇವರಿಗೆ ಪೂರ್ಣಗೊಳಿಸಬೇಕಾಗಿದೆ. ಮಹಿಳಾ ಕೃಷಿ ಕಾರ್ಮಿಕ ಜನಾಂಗದ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಗಾಗಿ ಯೋಜನಾರೂಪು ರೇಷೆಗಳನ್ನು ಈ ದಿಕ್ಕಿನಲ್ಲಿ ರೂಪಿಸಬೇಕಾಗಿಗಿದೆ.



**ಕೃಷಿ ಕಲಿಕೆಯಲ್ಲಿ ಹೆಣ್ಣು:–** ಇಂದು ವಿಜ್ಞಾನದ ನೆರವಿನಿಂದ ಭಾರತದ ಅರ್ಥವ್ಯವಸ್ಥೆಯ ಬೆನ್ನೆಲಬಾದ ಕೃಷಿ ಬಹುವಾಗಿ ಮುಂದುವರಿಯುತ್ತಿದೆ. ಜೀವನಾಧಾರ ಕೃಷಿ ವಾಣಿಜ್ಯ ಕೃಷಿಯಾಗಿ ಪರಿವರ್ತನೆಗೊಂಡಿದೆ. ಆಧುನಿಕ ಯಂತ್ರೋಪಕರಣಗಳು, ಸುಧಾರಿತ ಮಿಶ್ರ ತಳಿಗಳು ಕೃಷಿಯನ್ನು ಪ್ರವೇಶಿಸಿ ದೇಶದಲ್ಲಿ ಹಸಿರು ಕ್ರಾಂತಿ ಮೂಡಿದೆ. ಅಂತೆಯೇ, ಕೃಷಿ ಕಲಿಕೆಯತ್ತ ವಾಲುತ್ತಿರುವ ಹುಡುಗಿಯರ ಸಂಖ್ಯೆಯೂ ಹೆಚ್ಚುತ್ತಿದೆ. ಹುಡುಗಿ, ಕೃಷಿ ವಿಶ್ವ ವಿದ್ಯಾಲಯದಲ್ಲಿ ಕಲಿಯುವುದೆಂದರೆ ಮೂಗಿನ ಮೇಲೆ ಬೆರಳಿಡುವ ಕಾಲವೊಂದಿತ್ತು. ಆದರೆ ಇಂದು ಇದು ಸಾಮಾನ್ಯ ವಿಸಯವಾಗಿದೆ. ಕೃಷಿ ವಿಶ್ವ ವಿದ್ಯಾಲಯಗಳಲ್ಲಿ ಹುಡುಗಿಯರು, ಉಳುಮೆ, ನಾಟಿ, ವಿವಿಧ ಬಗೆಯ ಬೆಳೆಗಳನ್ನು ಬೆಳೆಯುವ ವಿಧಾನಗಳು, ಬೆಳೆಗಳಿಗೆ ಬೀಳುವ ಕೀಟಗಳು ಮತ್ತು ರೋಗಗಳು, ಅವುಗಳಿಗೆ ಪರಿಹಾರೋಪಾಯಗಳು, ಮಣ್ಣಿನ ಪರೀಕ್ಷೆ, ಹಳ್ಳಿಗಳಿಗೆ ಹೋಗಿ ಬೆಳೆಗಳ ಬಗ್ಗೆ ವಿಸ್ತರಣಾ ಕೆಲಸ ಹೀಗೆ ಪ್ರತಿಯೊಂದನ್ನು ಕಲಿಯುತ್ತಿದ್ದಾರೆ.

ನಮ್ಮ ದೇಶದಲ್ಲಿ ಕೇರಳದ ನಂತರ ಹೆಚ್ಚು ಸಂಖ್ಯೆಯಲ್ಲಿ ಕೃಷಿ ವಿದ್ಯಾರ್ಥಿನಿಯರಿರುವ, ವಿಶ್ವ ವಿದ್ಯಾಲಯವೆಂದರೆ ಬೆಂಗಳೂರು ಕೃಷಿ ವಿಶ್ವ ವಿದ್ಯಾಲಯ. ಮೊಟ್ಟ ಮೊದಲಿಗೆ ಹುಡುಗಿ ಇದನ್ನು ಪ್ರವೇಶ ಮಾಡಿದ್ದು 1971 ರಲ್ಲಿ. ನಮ್ಮ ರಾಜ್ಯದ ಹುಡಿಗಿಯರು ಮಾತ್ರವಲ್ಲದೆ ಬೇರೆ ಬೇರೆ ರಾಜ್ಯಗಳಿಂದಲೂ, ದೇಶಗಳಿಂದಲೂ ಕೃಷಿ ಕಲಿಕೆಗೆ ಹುಡುಗಿಯರು ಇಲ್ಲಿಗೆ ಆಗಮಿಸುತ್ತಿದ್ದಾರೆ. ಅವರಿಗಾಗಿ ಒಂದು ಪ್ರತ್ಯೇಕ ಹಾಸ್ಟಲ್‌ನ್ನೂ ಆರಂಭಿಸಿದ್ದಾರೆ. ಪದವಿ ಪಡೆದ ಹುಡುಗಿಯರು ಕೃಷಿ ಅಧಿಕಾರಿಗಳಾಗಿ, ಕೃಷಿ ವಿಸ್ತರಣಾಧಿಕಾರಿಗಳಾಗಿ, ಸಂಶೋಧಕರಾಗಿ, ತಾಂತ್ರಿಕ ಸಲಹೆಗಾರರಾಗಿ, ಕೃಷಿಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಮಹಿಳೆಯರು ಕೇವಲ ಮಕ್ಕಳ ಆರೋಗ್ಯ ಪಾಲನೆ ಮತ್ತು ಗೃಹ ಕೃತ್ಯಗಳಿಗಷ್ಟೇ ಸೀಮಿತವಾಗಿರಬೇಕೆಂಬ ಸಂಪ್ರದಾಯ ಬದ್ಧ ಮನೋಭಾವನೆ ಇಂದು ಕಡಿಮೆಯಾಗುತ್ತಿದೆ. ಮಾನವ ಶಕ್ತಿಯ ಸದುಪಯೋಗದ ನಿಟ್ಟಿನಲ್ಲಿ ಮಹಿಳೆಯರು ಸಾಗುತ್ತಿದ್ದಾರೆ. ಆರ್ಥಿಕ ರಂಗದ ಎಲ್ಲಾ ಕ್ಷೇತ್ರಗಳಲ್ಲೂ ಪುರುಷರಿಗೆ ಸರಿಸಾಟಿಯಾಗಿ ದುಡಿಯುತ್ತಿದ್ದು ಜೀವನ ಮಟ್ಟವನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ. ಸ್ವಾತಂತ್ರ್ಯ, ಸಮಾನತೆ, ಸ್ವಾವಲಂಬನೆಗಳಿಗಾಗಿ ಹೋರಾಡುತ್ತಿದ್ದಾರೆ. ಆದರೆ ಮಹಿಳಾ ವರ್ಗದ ಇನ್ನೊಂದು ಮುಖವಾದ ಮಹಿಳಾ ಕೃಷಿಕಾರ್ಮಿಕರು ದಿನ ದಿನಕ್ಕೂ ಸವೆಯುತ್ತಿದ್ದಾರೆ. ಅನಂತರ ರಾಷ್ಟ್ರೀಯ ಮಹಿಳಾ ವರ್ಷ ಈ ವರ್ಗದ ಮೇಲೆ ಯಾವ ಪ್ರಭಾವವನ್ನು ಬೀರಿಲ್ಲ. ಬೌದ್ಧಿಕವಾಗಿ ಯಂತೂ ಇವರು ತೀರಾ ಹಿಂದುಳಿದಿದ್ದಾರೆ. ಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರಿಗೆ ದೊರೆಯುವ ಸೌಲಭ್ಯಗಳಿಂದ ಈ ವರ್ಗದವರು ವಂಚಿತರಾಗಿದ್ದಾರೆ. ಇಂದು ಎಲ್ಲೆಲ್ಲೂ ಮಹಿಳಾ ಸ್ವಾತಂತ್ರ್ಯದ ಕೂಗು ಕೇಳಿ ಬರುತ್ತಿದೆ.

ನಮ್ಮ ದೇಶದಲ್ಲಿ 300 ಕ್ಕೂ ಹೆಚ್ಚು ಮಹಿಳಾ ಕಲ್ಯಾಣ ಸಂಘಗಳಿವೆ ಆದರೂ ಈ ದುರ್ದೈವಿ ಮಹಿಳಾ ಕೃಷಿಕಾರ್ಮಿಕರ ಸ್ಥಿತಿಯಲ್ಲಿ ಯಾವ ಮಾರ್ಪಾಡೂ ಕಂಡು ಬಂದಿಲ್ಲ. ಇವು ನಮ್ಮ ಸಮಸ್ಯೆಗಳು ಎಂದು ಹೇಳುವ ಚೈತನ್ಯವನ್ನೇ ಇವರು ಕಳೆದುಕೊಂಡಿದ್ದಾರೆ. ಕೈಗಾರಿಕಾ ಕ್ಷೇತ್ರದಲ್ಲಿನ ಮಹಿಳಾ ಕಾರ್ಮಿಕರಿಗಾದರೆ ನಿಗದಿಯಾದ ಸಂಬಳ ಬರುತ್ತದೆ. ಬೋನಸ್ ಸೌಕರ್ಯವಿರುತ್ತದೆ. ನಿವೃತ್ತಿ ಹೊಂದಿದಮೇಲೆ ಆರ್ಥಿಕ ಭದ್ರತೆ ಇರುತ್ತದೆ. ಮಕ್ಕಳ ವಿದ್ಯಾಭ್ಯಾಸಕ್ಕೆ ಮತ್ತು ಅವರ ಆರೋಗ್ಯ ರಕ್ಷಣೆಗೆ ಸೌಲಭ್ಯಗಳಿರುತ್ತವೆ, ವೇತನ ಸಾಲದಿದ್ದಲ್ಲಿ ಪುರುಷ ಕಾರ್ಮಿಕರೊಡನೆ ಸೇರಿ ಮುಷ್ಕರ ಹೂಡಿ ಅನುಕೂಲಗಳನ್ನು ಪಡೆಯುವ ನೈತಿಕ ಮತ್ತು ಸಾಮಾಜಿಕ ಹಕ್ಕು ಅವರಿಗಿರುತ್ತದೆ. ಯಾವುದೇ ಶೋಷಣೆಗೆ ಒಳಗಾಗದೆ ಜೀವನ ನಡೆಸುವ ಸ್ಥೈರ್ಯ ಅವರಿಗಿದೆ. ಆದರೆ. ಮಹಿಳಾ ಕೃಷಿ ಕಾರ್ಮಿಕರು ಮಾತ್ರ ಮೇಲೆ ಹೇಳಿದ ಯಾವುದೇ ಅನುಕೂಲವಿಲ್ಲದೆ ನಿರಂತರ ಬವಣೆಯಲ್ಲಿ ಬಳಲಿ ಬೆಂಡಾಗುತ್ತಿದ್ದಾರೆ. ನಗರಗಳಲ್ಲಿ ಮಹಿಳೆಯರ ಸಮಸ್ಯೆಗಳನ್ನು ನಿವಾರಿಸಿ ಅವರ ಯೋಗಕ್ಷೇಮ ಸಾಧಿಸಲು ಅನೇಕ ಸಂಘ-ಸಮಿತಿಗಳು ಜನ್ಮತಾಳಿವೆ. ಇವು ಮಹಿಳೆಯರ ಕಷ್ಟ ಕಾರ್ಪಣ್ಯಗಳನ್ನು ದೂರ ಮಾಡಲು ಶ್ರಮಿಸುತ್ತಿವೆ. ಇಂತಹ ಸಂಘ-ಸಮಿತಿಗಳು ಹಳ್ಳಿ ಹಳ್ಳಿಗಳಲ್ಲೂ ಹುಟ್ಟಿಕೊಳ್ಳಬೇಕು. ಗುಡಿ ಕೈಗಾರಿಕೆ, ಸಣ್ಣ ಕೈಗಾರಿಕೆ, ಕುಶಲ ಕೈಗಾರಿಕೆ, ಅಂತ್ಯೋದಯ, ವಿಶೇಷ ಘಟಕ ಯೋಜನೆ, ಕುರಿ, ಕೋಳಿ, ಮೇಕೆ ಸಾಕಾಣಿಕೆ, ಹಿಂದುಳಿದ ವರ್ಗಗಳ ಚೈತನ್ಯ ಯೋಜನೆ ಮತ್ತಿತರ ಆರ್ಥಿಕ ಕಾರ್ಯಕ್ರಮಗಳ ಬಗ್ಗೆ ಈ ಸಂಘಗಳು ಕೃಷಿ ಕಾರ್ಮಿಕ ಮಹಿಳೆಯರಿಗೆ ಕ್ರಮಬದ್ಧವಾದ ತಿಳುವಳಿಕೆ ಕೊಡುವುದರ ಜೊತೆಗೆ, ಅವುಗಳ ಸದುಪಯೋಗದ ಪ್ರಾಮುಖ್ಯತೆಯನ್ನು ತಿಳಿಸಬೇಕು:

ಮಹಿಳಾ ಕೃಷಿ ಕಾರ್ಮಿಕರು ಪ್ರಗತಿ-ಅಭ್ಯುದಯಗಳ ಪ್ರೇರಕ ಶಕ್ತಿ. ಅವರನ್ನು ಕಡೆಗಣಿಸುವುದು ಇಡೀ ರಾಷ್ಟ್ರದ ಭವಿಷ್ಯದ ವಿನಾಶಕ್ಕೆ ಆಹ್ವಾನ ಕೊಟ್ಟಂತೆ. ಆದ್ದರಿಂದ, ರಾಜ್ಯ ಸರಕಾರಗಳು ಇವರ ಸಮಸ್ಯೆಗಳ ನಿರ್ಮೂಲನದ ಬಗ್ಗೆ ಹೆಚ್ಚಿನ ಗಮನ ಹರಿಸಬೇಕು. ಈ ದಿಸೆಯಲ್ಲಿ ಉತ್ಸುಕತೆಯಿಂದ ಮತ್ತು ತ್ವರಿತವಾಗಿ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕು. ಇದಕ್ಕೆ ಜನತೆಯಲ್ಲಿ ಅರಿವು, ಪ್ರೋತ್ಸಾಹ ಹಾಗೂ ಮಾರ್ಗದರ್ಶನ ಅಗತ್ಯ.



# ಸನ್ಯಾಸ

ಸನ್ಯಾಸವೆಂದರೆ ಹೃದಯದ ಬಣ್ಣವನ್ನು ಬದಲಾಯಿಸಿ ಕೊಳ್ಳುವುದು. ಯಾರ ನಾಲಿಗೆ, ಜನನೇಂದ್ರಿಯ, ಹೊಟ್ಟೆ ಮತ್ತು ಕೈಗಳು ಸುಶಿಕ್ಷಿತವಾಗಿರುವವೋ ಆತನು ಸನ್ಯಾಸ ಸ್ವೀಕಾರಕ್ಕೆ ಅರ್ಹನು. ಸನ್ಯಾಸವನ್ನು ಸ್ವೀಕರಿಸುವುದಕ್ಕೆ ಮುಂಚೆ ಸಾಧನ ಚತುಷ್ಟಯಗಳಲ್ಲಿ ನುರಿತಿರಬೇಕು. ಸನ್ಯಾಸಿಯು ಸರ್ವಸ್ವವೂ ಆತ್ಮನೇ. ಇದಿಲ್ಲದೆ ಸನ್ಯಾಸಿಯುಜಗತ್ತಿಗೂ ಮತ್ತು ಆತನ ಸಂಸ್ಕಾರಕ್ಕೂ ಸತ್ತಂತಯೇ. ತ್ಯಾಗ ಪೂರ್ಣನಿಗಲ್ಲದೆ, ಬ್ರಹ್ಮ ವಿದ್ಯಾ ಮಾರ್ಗವು ಸಾಧ್ಯವಿಲ್ಲ. ಜ್ಞಾನಿಯಾದ ಸನ್ಯಾಸಿಯು ಮಾತ್ರ ಬ್ರಹ್ಮವನ್ನು ಪಡೆಯ ಬಲ್ಲನ ಜ್ಞಾನವು, ಜಗದ್ವ್ಯಾಪಾರವನ್ನು ಬಿಟ್ಟು ಮೇಲಕ್ಕೆ ಹೋದ ಸನ್ಯಾಸಿಗೆ ಅಡ್ಡಿ ಆತಂಕಗಳು ಜಯಗಳಿಸುವುವಕ್ಕೆ ಮೆಟ್ಟಿಲುಗಳು. ಚಂಚಲ ಚಿತ್ತರಾಗ ಬೇಡಿ. ಭಯ ಪಡದಿರಿ. ನಿಷ್ಪ್ರಯೋಜನವಾದ ಪಶ್ಚಾತ್ತಾಪಕ್ಕೆ ಅವಕಾಶ ಕೊಡಬೇಡಿ. ಪ್ರತಿಯೊಂದು ಸಾವೂ ನಿಮಗೆ ನೆನಪು ಮಾಡುತ್ತದೆ. ಗಂಟೆ ಹೊಡೆದಾಗಲೆಲ್ಲಾ ಸಾವು ಸಮೀಪಿಸುತ್ತದೆ ಎಂದು ಅದು ಹೇಳುತ್ತಿದೆ. ವಾಸನೆಗಳ ಅಂತಃ ಪ್ರವಾಹವನ್ನು ನಾಶ ಮಾಡಿ ಕೊಳ್ಳಿ. ಎಲ್ಲಾ ಕಾಮನೆಗಳು, ಅಹಂಕಾರ ಮತ್ತು ವಾಸನೆಗಳ ನಿಜವಾದ ತ್ಯಾಗ. ಮಿತವಾದ ಪ್ರಯತ್ನದಿಂದ ಪೂರ್ಣ ಬ್ರಹ್ಮ-ಚರ್ಯವನ್ನು ಪಡೆಯಲಾರಿರಿ. ನಿರಂತರವಾದ ಎಚ್ಚರಿಕೆ ಮತ್ತು ಕಠಿಣ ಸಾಧನವು ಅತ್ಯಗತ್ಯ. ಅಜೇಯವಾದ ಅಹಂಕಾರವನ್ನು ನಿರ್ದಾಕ್ಷಿಣ್ಯವಾಗಿ ಕತ್ತರಿಸಿ ಬಿಸಾಡಿರಿ. ಅತ್ಯಲ್ಪ ಸಾಧನೆಯೂ ಸಹ ನಿಮ್ಮ ವಿಕಾಸಕ್ಕೆ ಸಹಾಯವಾಗುವಂತೆ ಶೇಖರಿಸಲ್ಪಡುತ್ತದೆ.

ಆತ್ಮ ವಿಶ್ಲೇಷಣವನ್ನು ಅಭ್ಯಾಸ ಮಾಡಿಕೊಳ್ಳಿ. ನಿಮ್ಮ ಸಾಧನವು ಒಂದೆ ಸಮನಾಗಿ ಜರುಗುತ್ತಿರಲಿ. ಮುಕ್ತಿಯು ಸಿಗುವವರೆಗೆ ಸಾಧನವನ್ನು ನಿಲ್ಲಿಸಬೇಡಿ. ಬ್ರಹ್ಮಚರ್ಯವೆಂಬ ಸದ್ಗುಣ ವಿಲ್ಲದವನು ಮನುಷ್ಯನಲ್ಲ. ನಿತ್ಯತ್ವವೇ ಸಾಧುತ್ವದ ಅಂತ್ಯವು. ಬ್ರಹ್ಮಚರ್ಯವೇ ಸಾಧುತ್ವಕ್ಕೆ ಬೀಗದ ಕೈ. ಸಕಾಯಕರ್ಮಗಳನ್ನು ಈ ಕ್ಷಣ ಬಿಟ್ಟುಬಿಡಿ. ನಿಜವಾದ ಸಾಧುರು ಸಿದ್ಧಿಗಳನ್ನು ವಿಷದಂತೆ ಕಾಣಬೇಕು. ಇಂದ್ರಿಯಗಳನ್ನು ಮತ್ತು ಮನಸ್ಸನ್ನು ಶಿಸ್ತಿಗೆ ಒಳಪಡಿಸಿರಿ. ಕಾರ್ಕೋಟ ವಿಷವು ವಿಷವಲ್ಲ, ಭೋಗವಸ್ತುಗಳು ನಿಜವಾದ ವಿಷವು. ನಿಮ್ಮನ್ನು ಸಂಪೂರ್ಣವಾಗಿ ಪರಮಾತ್ಮನಿಗೆ ಅರ್ಪಿಸಿಕೊಳ್ಳಿ. ಯಾರು ಬ್ರಹ್ಮಚರ್ಯ ತರಾಗಿತ್ತರೋ, ಅವರು ಧೀರರು, ಬ್ರಹ್ಮಚರ್ಯ ಇಲ್ಲದ ವಿದ್ಯೆಯು ಬರಡು ಜ್ಞಾನಿಯಲ್ಲಿ ಕಾಮ, ಕ್ರೋಧ ಮತ್ತು ದ್ವೇಷಗಳೆಲ್ಲಾ ಅಸ್ತಿತ್ವದಲ್ಲಿರುತ್ತವೆ

– ಸಂಗ್ರಹ: ಎಂ. ರೇಣುಕಾರಾಧ್ಯರು.

# ಲಿಂಗವಂತ ಧರ್ಮದ ಪ್ರಾಚೀನತೆ

ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ.
ಶಾಲಾ ಶಿಕ್ಷಕರು ಗೋಕುಲ ಹುಬ್ಬಳ್ಳಿ, ಆಯುರ್ವೇದ ಉಚಿತ ಚಿಕಿತ್ಸಾ ಸಲಹೆಗಾರರು RMP

ಸುಮಾರು ಐದು ಸಹಸ್ರ ವರ್ಷಗಳ ಹಿಂದಿನ ಮಾತು. ಜನರು ಇನ್ನೂ ಕಲ್ಲಿನ ಆಯುಧ ಮತ್ತು ಶಕ್ತಿಯೊಡನೆ ಮತ್ತು ತಾಮ್ರ, ಕಂಚಿನ ಪಾತ್ರೆಗಳನ್ನು ಬಳಸುತ್ತಿದ್ದ ಕಾಲ. ಆಗಲೇ ದ್ರಾವಿಡರು ಸುಸಜ್ಜಿತವಾದ ನಗರಗಳಲ್ಲಿ ವಾಸಿಸುತ್ತಿದ್ದರು. ಬೇರೆ ಬೇರೆ ದೇಶಗಳೊಡನೆ ವ್ಯಾಪಾರ ಸಂಬಂಧಗಳನ್ನು ಇಟ್ಟುಕೊಂಡಿದ್ದರು. ಗೋಧಿ ಜವೆಗೋಧಿಗಳನ್ನು ಬಳಸುತ್ತಿದ್ದರು. ಎತ್ತು ಎಮ್ಮೆ, ಕುರಿ, ಹಂದಿ, ನಾಯಿ, ಆನೆ ಒಂಟೆಗಳನ್ನು ಪಳಗಿಸಿಕೊಂಡಿದ್ದರು. ಚಕ್ರದ ಗಾಡಿಗಳು ಉಪಯೋಗದಲ್ಲಿದ್ದವು. ಚಿನ್ನ, ಬೆಳ್ಳಿ, ಸೀಸ, ತಾಮ್ರ, ಕಂಚುಗಳ ಬಳಕೆ ಇತ್ತು. ರಾಟೆಯಲ್ಲಿ ನೂಲುವುದನ್ನು ಚೆನ್ನಾಗಿ ಬಲ್ಲರು. ಯುದ್ಧದಲ್ಲಿ ಬಿಲ್ಲು ಬಾಣ ಕೊಡಲಿ ಭರ್ಜಿಗಳನ್ನು ಉಪಯೋಗಿಸುತ್ತಿದ್ದರು. ರತ್ನ ಕಚಿತವಾದ ಬಂಗಾರದ ಒಡವೆಗಳನ್ನು ಶ್ರೀಮಂತರು ಅಲಂಕರಿಸಿಕೊಳ್ಳುತ್ತಿದ್ದರು. ಓದು ಬರಹಗಳನ್ನು ಬಲ್ಲವರು ನಗರದಲ್ಲಿ ಇರುತ್ತಿದ್ದರು. ಉಳಿದುಕೊಳ್ಳಲು ಧರ್ಮಶಾಲೆ, ಛತ್ರ, ಖಾಸ ಬಂಗಲೆಗಳಿದ್ದವು. ಇವುಗಳಲ್ಲಿ ಒಳ ಚರಂಡಿ, ವ್ಯವಸ್ಥೆ ಇತ್ತು ಸ್ನಾನದ ಗೃಹಗಳಿದ್ದವು. ಕಲ್ಲಿನ ಕೋಟೆಗಳಿದ್ದವು. ಸುಟ್ಟ ಇಟ್ಟಿಗೆಗಳಿಂದ ಮನೆ ಕಟ್ಟಿ ಕೊಂಡಿದ್ದರು. ಸುಟ್ಟ ಮಣ್ಣಿನ ಮಡಿಕೆಗಳನ್ನು ಉಪಯೋಗಿಸುತ್ತಿದ್ದರು. ಇಂಥ ಸುಸಂಸ್ಕೃತರಾಗಿದ್ದ ಆರ್ಯರು ಆಕ್ರಮಣ ನಡೆಯಿಸಿ ಹಾಳುಗೆಡವಿದರು. 1) ಶ್ರೀಯುತ ಲಿಂ. ಟಿ.ಎಸ್. ಮಲ್ಲಪ್ಪನವರು ಮತ್ತು ಎ.ಪಿ. ಕರಮರಕರ ಇವರ ಗ್ರಂಥ ಗಳನ್ನು ಆಧರಿಸಿ 2) "ಆರ್ಯರ ಋಗ್ವೇದವೇ ಮೊದಲಾದ ಹಿಂದಿನ ವಾಙ್ಮಯದಲ್ಲಿ ಶಿವನ ಸಂಬಂಧವಾಗಿ "ತ್ರಿನೇತ್ರ" 'ತ್ರಿಶೂಲಧರ, ಮೊದಲಾದ ಕಲ್ಪನೆಗಳಿಗೆ ಆಧಾರವನ್ನು ಸಿಂಧೂ ನದಿಯ ತೀರದಲ್ಲಿನ ಅವಶೇಷಗಳ ಪರಿಶೀಲನೆಯಿಂದ ದೊರಕಿದೆ ಎನ್ನುತ್ತಾರೆ. ಮುಂದುವರೆದು ಅವರು ಆಗಿನ ಕಾಲದಲ್ಲಿ ಶಿವನನ್ನು 'ಆನ್, ಎಂದು ಕರೆಯುತ್ತಿದ್ದರು. ಮುಂದೆ ಅದು 'ಅಣು, 'ಸ್ಥಾಣು, ಮುಂತಾದ ಶಿವನ ನಾಮಗಳಿಗೆ ಹಿನ್ನೆಲೆಯಾಯಿತು.

ಅಲಿನ್ ಮತ್ತು ಅನ್‌ವಿನ್ ಎಂಬವರು ಬರೆದಿರುವ " ದಿ ವೇದಿಕ್-ಏಜ್" ಎಂಬ ಗ್ರಂಥದಲ್ಲಿ ಮೊಹೊಂಜೋದಾರ ಹರಪ್ಪಾ ಜನರು ಶಿವ - ಶಕ್ತಿಯರನ್ನು ಪೂಜಿಸುತ್ತಿದ್ದರು. ಮಾತ್ರವಲ್ಲದೆ ಅಲ್ಲಿ ಪದ್ಮಾಸನದಲ್ಲಿ ಕುಳಿತು .ನಾಸಾ ಗ್ರಹದಲ್ಲಿ ದೃಷ್ಟಿಯನ್ನಿಟ್ಟು ಧ್ಯಾನ ಮಗ್ನನಾಗಿರುವ ಶಿವನ ವಿಗ್ರಹವು ದೊರೆತಿರುವುದು.

ಅಷ್ಟೇ ಅಲ್ಲದೆ ಫ್ಲಾದರ್‌ಹೆರಾಸ್, ಅವರು ೧೯೩೬ ರಲ್ಲಿ ಮುಂಬಯಿ ವಿಶ್ವ ವಿದ್ಯಾಲಯದ ಜರ್ನಲ್‌ದಲ್ಲಿ ಬರೆದಿರುವಂತೆ,

1) "ಪ್ರಿ ಹಿಸ್ಟಾರಿಕ್ ಇಂಡಿಯಾ" ಪು ೨೫೩-೨೫೮ ಎಡಿನ್ ಬರೋ [illegible] ವಿದ್ಯಾಲಯ ಪ್ರೊ|| ಸ್ಟುಅರ್ಟ ಪಿಗ್ಗಟ್ ಇವರು ಬರೆದ, ಮತ್ತು [illegible] ಹೈಕೋರ್ಟಿನ ನ್ಯಾಯ [illegible] ಇವರು ವೀರಶೈವ ಉಗಮ ಮತ್ತು ಪ್ರಗತಿ (೧೯೬೯) ೪೯-೬೦ ಪುಟ.

2) ರಿಲಿಜನ್ಸ್ ಆಫ್ ಇಂಡಿಯಾ ಪು ೩೯-೩೯

" The Supreme Being is three eyed. This is the idea about in modern Hinduism which we find dearly expressed with reference to God in the clscriptions of proto Indians " ಮುಂತಾಗಿ ಹೇಳಿ ಶಿವನಿರುವ ಅಷ್ಟತನು, ನಟರಾಜ, ತಾಂಡವನ್. ತ್ರಿಶೂಲಧಾರಿ; ಸರ್ಪಭೂಷಣ, ಪಂಶುಧಾರಿ, ಅರ್ಧನಾರೀಶ್ವರ, ಪರಾತ್ಪರ, ಸರ್ವಜ್ಞ, ಊರ್ಧ್ವರೇತ, ಪಶುಪತಿ, ಯೋಗೀಶ್ವರ ಮುಂತಾದ ಹೆಸರುಗಳೆಲ್ಲವೂ ಮಹೆಂಜೋದಾರ ಸಂಸ್ಕೃತಿಯಲ್ಲಿಯೇ ಇದ್ದವು ಎಂಬುದನ್ನು ಫಾದರ್ ಹೆರಾಸ್ ಅವರು ಉಲ್ಲೇಖಿಸುತ್ತಾರೆ.

ಲಿಂಗಾರ್ಚನೆ-ಲಿಂಗಧಾರಣ

ಮಹೆಂಜೋದಾರ ಮತ್ತು ಹರಪ್ಪಾ ಅವಶೇಷಗಳಲ್ಲಿ ಹತ್ತು ಬಗೆಯ ಲಿಂಗಗಳು ಸಿಕ್ಕಿವೆ. 1) ಎಂಬುವನ್ನು ಸರ್ ಜಾನ್ ಮಾರ್ಷಲ್ಲರು ಹೇಳಿರುವದಲ್ಲದೆ, ಅವುಗಳಲ್ಲಿ ಸಣ್ಣ ಲಿಂಗಗಳನ್ನು ಇಂದಿನ ಲಿಂಗವಂತರ ದೇಹದ ಮೇಲೆ ಧರಿಸಿಕೊಳ್ಳಲು ಉಪಯೋಗಿಸುತ್ತಿದ್ದರೆಂದೂ, ದೊಡ್ಡವುಗಳನ್ನು ಪೀಠದ ಮೇಲಿರಿಸಿ ಪೂಜೆಗೆ ಇಟ್ಟುಕೊಳ್ಳುತ್ತಿದ್ದರೆಂದೂ ಸ್ಪಷ್ಟಪಡಿಸಲಾಗಿದೆ. ಈ ಲಿಂಗವಂತರು, "ವೀರಶೈವರೆಂದೇ ಅವರ ಗ್ರಂಥದ (ಪು ೫೯) ಆಡಿಟ್ ಟಿಪ್ಪಣಿಯಲ್ಲಿನ ಉಲ್ಲೇಖದಿಂದ ಸ್ಪಷ್ಟವಾಗುತ್ತದೆ.

Indeed the only explanation applicable to them, all is that they were sacred objects of some sort the larger ones serving as aniconic agalmates to be carried on the person, gust as miniature lings. one commonly carried by saivites to day (page 59)

[illegible] ಶಿವರಹಸ್ಯ" (ಪುಟ [illegible]) ದಲ್ಲಿ ಕೀಥ್ ಎಂಬವರು ಪ್ರಿಜಿಲಿಸ್ಕಿರವರ ಅಭಿಪ್ರಾಯವನ್ನು ಸಮರ್ಥಿಸಿ ಯುರೋಪಿನಲ್ಲಿ



ತಾಯತದಂತೆ
ಭೂ ಮಧ್ಯ ಸಮುದ್ರ ತೀರದ ಕೆಲವು ಜನಗಳಲ್ಲಿ ಲಿಂಗ ಚಿಹ್ನವನ್ನು
ಪೀಡಾ ನಿವಾರಣೆಗಾಗಿ ಕೊರಳಲ್ಲಿ ಕಟ್ಟಿಕೊಳ್ಳುವ ರೂಢಿ ಇದ್ದಿತು ಈ ಪದ್ಧತಿಯು
ಆಸ್ಟ್ರೋ ಏಷಿಯಾಟಿಕ್ ಜನಾಂಗದವರಿಂದ [illegible] ಸಂಭವ ವಿದೆ ಎಂಬುದು
ಪ್ರೀಲಸ್ಕರಿಯವರ ಮತ, ಎಂದರೆ ಮೆಡಿಟರೇನಿಯನ್ ತೀರದ ಜನರು ಇಷ್ಟ ಪ್ರಾಪ್ತಿ
ಮತ್ತು ಅನಿಷ್ಟ ನಿವಾರಣೆಗಾಗಿ ಲಿಂಗವನ್ನು ಕೊರಳಲ್ಲಿ ಕಟ್ಟಿ ಕೊಳ್ಳುತ್ತಿದ್ದರು.
ಪ್ರೀಲಸ್ಕರಿಯರು ಹೇಳಿದ ಆಸ್ಟ್ರೋ-ಏಶಿಯಾಟಿಕ್ [illegible]
ದ್ರಾವಿಡರಿಗಿಂತಲೂ ಹಿಂದೆ ಇದ್ದ ಮೂಲ ನಿವಾಸಿಗಳಿಂದ ಲಿಂಗಧಾರಣವನ್ನು [illegible]
ಕಲಿಸಿದ್ದರು. ಮಾತ್ರವಲ್ಲದೆ ಮೊಹೆಂಜೋದಾರ-ಹರಪ್ಪ ನಿವಾಸಿಗಳು, ಲಿಂಗವನ್ನು
ಧರಿಸುತ್ತಿದ್ದಂತೆ ಮೇಡಿಟರೇನಿಯಾನ್ ತೀರ ನಿವಾಸಿಗಳೂ ಆ ಲಿಂಗವನ್ನು ಕೊರಳಲ್ಲಿ
ಕಟ್ಟಿ ಕೊಳ್ಳುತ್ತಿದ್ದರು. (ಕಲ್ಯಾಣ ಶಿವ: ಕದಲ್ಲಿಯ ಪು. ಸ. ೫೨.

ಇದು ಯುರೋಪಿನ ಆರ್ಯರಿಗೆ ತಿಳಿದ ವಿಷಯ ವಾದುದರಿಂದ ಭಾರತದ ಮೂಲ
ನಿವಾಸಿಗಳಿಂದ ಇದನ್ನು ಕಲಿತಿರಬೇಕು ಎಂಬುದು ಇದರ ಅಭಿಪ್ರಾಯ.

ಲಿಂಗವನ್ನು ಧರಿಸಿಕೊಳ್ಳಲು ಉದರಲ್ಲಿ ರಂಧ್ರವಿಲ್ಲದುದರಿಂದ ಒಂದು
ಬಗೆಯ ಕರಡಿಗೆಯಲ್ಲಿ ಲಿಂಗವನ್ನಿಟ್ಟು ಧರಿಸಿಕೊಳ್ಳುತ್ತಿದ್ದರು. ಎಂದು ಡಾ||
ಮ್ಯಾತ್ ಅವರ ಅಭಿಪ್ರಾಯವನ್ನು ಮಾರ್ಷಲ್ಲರು ತಮ್ಮ ಗ್ರಂಥದ ಮುನ್ನುಡಿ-
ಯಲ್ಲಿ ಸ್ಪಷ್ಟ ಪಡಿಸಿದ್ದಾರೆ. ಈ ವಿಷಯದ ಮೇಲೆ ಡಾ|| ಮ್ಯಾತ್ ಅವರು
ಉಪನ್ಯಾಸ ಮಾಡಿದ್ದನ್ನು ಕನ್ನಡಿಸಿದ್ದು ಹೀಗಿದೆ-

" ಎಂಟನೆಯ ಚಿತ್ರದಲ್ಲಿ ಪುರೋಹಿತನು ತನ್ನ ಎದೆಯಲ್ಲಿ ಧರಿಸುತ್ತಿದ್ದ
ಒಂದು ಬಗೆಯ ಭಾರವಾದ ಪದಕವಿದೆ. ಇದನ್ನು ಹಳದಿಯ ಬಳಪದ ಕಲ್ಲಿನಲ್ಲಿ
ಕೊರೆದಿದೆ. ಅಳತೆ ಎಲ್ಲ ಕಡೆಗೂ ಎರಡುವರೆ ಅಂಗುಲವಿದೆ. ಮುದ್ರಿಕೆಯಲ್ಲಿ ಕೂಡು
ಬರುವ ಪ್ರಾಣಿಯ ಚಿತ್ರವೂ ಇದರಲ್ಲಿ ಇದೆ. ಆ ಪ್ರಾಣಿಯ ಎದುರುಗಡೆ
ಯಾವದೋ ಒಂದು ಬಗೆಯ ಪೂಜಾ ವಸ್ತುವಿದೆ." ಪದಕವನ್ನು ಬಹುಶಃ
ಚಿನ್ನದ ಕರಡಿಗೆಯಲ್ಲೋ ಅಥವಾ ಇನ್ನಾವದೋ ಲೋಹದ ಭರಣಿಯಲ್ಲಿಯೋ
ಇಡುತ್ತಿದ್ದಂತೆ ಕಾಣುತ್ತದೆ. ಈ ವಿಜಾತಿಯವಾದ ವಸ್ತುವನ್ನು ಯಾವದೋ
ಧಾರ್ಮಿಕ ಕರ್ಮಕ್ಕೆ ಉಪಯೋಗಿಸಲಾಗುತ್ತಿತ್ತೆಂದು ಧಾರಾಳವಾಗಿ ಹೇಳಬಹುದು.

ಡಾ|| ಮ್ಯಾತ್ ಅವರ ಅಭಿಪ್ರಾಯದಂತೆ ಸೈಂಧವ ನಾಗರಿಕರು ಧರಿಸು
ತ್ತಿದ್ದ ಪೂಜಕ ವಸ್ತುವನ್ನು ಚಿನ್ನದ ಅಥವಾ ಲೋಹದ ಕರಡಿಗೆಯಲ್ಲಿ ಇಡು-
ತ್ತಿದ್ದರು. "ಮಾರ್ಷಲ್ಲರ ಪ್ರಕಾರ" ಆ ಜನರು ಲಿಂಗವನ್ನು ಧರಿಸುತ್ತಿದ್ದರು.
[illegible]ದ ಮೇಲೆ ಸೈಂಧವ ಜನಾಂಗದಲ್ಲಿ ಲಿಂಗಧಾರಣ ಇತ್ತೆಂದು ಸಿದ್ಧವಾಗುತ್ತದೆ.

ವಿಮರ್ಶಾವಿಶಾರದ ಧರ್ಮಸಂಶೋಧನಾ ಸಕ್ತಲಿಂ "ಅಕ್ಕೂಲಯ್ಯ ದೀಕ್ಷಿತರ ಅಭಿಪ್ರಾಯದಲ್ಲಿ" ವೇದದಲ್ಲಿ ಕಂಡು ಬರುವ ಪ್ರಮಥಗಣಗಳೇ ಅಂದಿನ ಆದಿವಾಸಿ-ಗಳು. ವೇದದಲ್ಲಿ ಹೇಳಿರುವ ವೃಷಭಗಣ, ಫಣಿಗಣ, ಮತ್ತು ಮರುತ್‌ಗಣಗಳು, ಸೇರಿದ ಸಂಘಕ್ಕೆ ಪ್ರಮಥಗಣ ಎಂದು ಹೆಸರು. ಋಗ್ವೇದ (೯-೯೭-೮)ದಲ್ಲಿ ಬರುವ ಪ್ರಹಲ ಸಾಸಸ್ತ್ರ ಫಲಂ ಮನ್ಯುಮಚ್ಛೌವಮಾದಸ್ತಂ ವೃಷಗಣಅಯಾಸು" ಹಂಸದಂತೆ ನಡಿಗೆಯುಳ್ಳ ವೃಷಗಣರೆಂಬ ಋಷಿಗಳು ಹೆದರಿ ಶೀಘ್ರವಾಗಿ ಶತ್ರು ನಾಶಕನಾದ ಸೋಮನನ್ನು ಕುರಿತು ಯಜ್ಞ ಗೃಹಕ್ಕೆ ಬಂದಿದ್ದಾರೆ. (ಸಾಯಣಭಾಷ್ಯ) ಎಂಬಲ್ಲಿ ವೃಷಭ ಗಣದ ಪ್ರಸ್ತಾಪ ಬಂದಿದೆ. ಇವರೇ ಲಿಂಗಧಾರಿಗಳ ಮೂಲ ಪುರುಷರು. ಇವರ ಸಂಸ್ಕೃತಿ ಇಂದಿಗೂ ನೀಲಗಿರಿಯಲ್ಲಿರುವ ಬಡಗ ಜನಾಂಗದಲ್ಲಿ ಇರುತ್ತದೆ. ೨) ಇಂದಿಗೂ ನೀಲಗಿರಿಯಲ್ಲಿ ವಾಸಿಸುವ 'ಬಡಗರು, ಗುಂಟೂರು ಜಿಲ್ಲೆಯವರೆಗೆ ವ್ಯಾಪಿಸಿದ್ದಾರೆ ಎಂಬುದಕ್ಕೆ ಅನೇಕ ಶಾಸನ ಆಧಾರಗಳಿವೆ ಎಂದು 'ನೆಲ್ಲೂರು ಜಿಲ್ಲೆ, ಕೊವಲಿ ಡಿವಿಜನ್, 'ಬಡಗೂರು, ಎಂಬ ಗ್ರಾಮವು ಅವರ ನಿವಾಸ ಆಗಿತ್ತೆಂದು ಮೋಟೂರು ವಿಶ್ವನಾಥ ಶರ್ಮ ಅವರು ಆಂಧ್ರಪ್ರಭಾ (ದಿನ ಪತ್ರಿಕೆ) ೧೮-೮-೪೫ ರಲ್ಲಿ ಬರೆದಿದ್ದಾರೆ.

ಪ್ರಬುದ್ಧ ಕರ್ನಾಟಕ ಭಾಷಸಂ। ತಾಮು ೩ ಸಂಚಿಕೆ (ಪು.51) ಶ್ರೀ ಡಿ. ಎಲ್. ನರಸಿಂಹ ಶಾಸ್ತ್ರಿಗಳು.
(ವೀರಶೈವ ಸಂಪಾದಕ ೧೯೬೨ ಸೆಪ್ಟೆಂಬರ್ ಶ್ರೀ ಅಕ್ಕೂಲಯ್ಯ ದೀಕ್ಷಿತರು ಬರೆದ ಲೇಖನ)






# ರೈತರಿಗೆ ಸಲಹೆ

## ಕರ್ನಾಟಕದಲ್ಲಿ ಬೆಳೆಯ ಬಹುದಾದ ಹೊಸ ಭತ್ತದ ತಳಿಗಳು-೧

ಜಿ. ಆರ್. ರಂಗಸ್ವಾಮಯ್ಯ ಕೃಷಿ—ಐ.ಸಿ.ಎ.ಆರ್

ಹಳೆಯ ನೀರು ಹೊಸ ನೀರಿಗೆ ದಾರಿ ಮಾಡಿ ಕೊಟ್ಟಂತೆ ಹಳೆಯ ತಳಿಗಳು ಕಾಲ ಕ್ರಮೇಣ ಹೊಸ ತಳಿಗಳಿಗೆ ದಾರಿ ಮಾಡಿ ಕೊಡುತ್ತವೆ. ಹಣ್ಣೆಲೆ ಉದುರುವುದು – ಹೊಸ ಎಲೆ ಚಿಗುರಲು ಅನಿವಾರ್ಯ; ಇದು ಪ್ರಕೃತಿಯ ನಿಯಮ. ಅಂತೆಯೇ ಎಂಥ ಉತ್ತಮ ಸಂಕರ ಭತ್ತದ ತಳಿಯಾದರೂ ಹಲವಾರು ವರ್ಷಗಳ ಬಳಿಕ ತನ್ನ ಅಂತಃ – ಸತ್ವವನ್ನು ಕಳೆದು ಕೊಂಡು ರೋಗ--ರುಜಿನಗಳಿಗೆ ತುತ್ತಾಗುವ ಇಳುವರಿ ಕಡಿಮೆ ನೀಡುವ ಲಕ್ಷಣಗಳನ್ನು ತೋರಿಸುತ್ತದೆ. ಈ ತಳಿಗಳನ್ನು ಸುಧಾರಿಸುವ ಹೊಸ ತಳಿಗಳ ಹುಡುಕಾಟ ನಿರಂತರವಾಗಿ ನಡೆದೇ ಇರುತ್ತದೆ. ಈ ಹುಡುಕಾಟದ ಫಲವಾಗಿ ಈ ವರ್ಷ ದೇಶದಲ್ಲಿ ವಿವಿಧ ಕೃಷಿ ಹವಾಮಾನಗಳಿಗೆ ಹೊಂದಿಕೊಳ್ಳುವಂಥ ೩೫ ಭತ್ತದ ತಳಿಗಳನ್ನು ವಿವಿಧ ರಾಜ್ಯಗಳಲ್ಲಿ ಬಿಡುಗಡೆ ಮಾಡಲಾಗಿದೆ.

ಇಂಥ ತಳಿಗಲ್ಲೊಂದಾದ ಮಂಡ್ಯ ವಿಜಯ, ಹೆ / ಐ. ಇಟಿ ೭೨೫೧ ತಳಿಗಿಂತ ೫ ರಿಂದ ೧೧ ಕ್ವಿಂಟಲ್ ಅಧಿಕ ಇಳುವರಿ ನೀಡುತ್ತದೆ. ಇದು ನೀರಾವರಿ ಪ್ರದೇಶಗಳಿಗೆ ಸೂಕ್ತ ತಳಿ; ತಡವಾಗಿ ನಾಟಿಮಾಡಿದ್ದಾಗಲೂ ಉತ್ತಮ ಇಳುವರಿ ನೀಡುವ ಲಕ್ಷಣಗಳನ್ನು ಹೊಂದಿದೆ.

ನೀರಾವರಿ ಅನುಕೂಲತೆಯಿರುವ ದಿಣ್ಣೆ ಪ್ರದೇಶಗಳಲ್ಲಿ ಬೆಳೆಯಲು ಆರ್. ಪಿ. ೨೦೮೬-೭೪೬-೧; ನೀರಾವರಿ ತಗ್ಗು ಪ್ರದೇಶಗಳಲ್ಲಿ ಬೆಳೆಯಲು 'ಐ.ಇ, ಟಿ, ೮೦೩೭ (ಸಿ ಆರ್ ೯೮-೮೦೮೧) ನೀರಾವರಿ ಪ್ರದೇಶಗಳಲ್ಲಿ ಬೆಳೆಯಲು 'ಐ.ಇ.ಟಿ, ೭೫೨೦– ತಳಿಗಳನ್ನು ಗುರುತಿಸ-ಲಾಗಿದೆ. ಇವನ್ನು ಹಿಡುವಳಿ ಪರೀಕ್ಷೆಗೊಳಪಡಿಸಲಾಗಿದೆ. ಇವಲ್ಲದೇ ಕಟಕ್‌ನ ಭಾರತೀಯ ಭತ್ತ ಸಂಶೋಧನ ಸಂಸ್ಥೆಯು ಪ್ರಾಯೋಗಿಕವಾಗಿ ಬೆಳೆದು ನೋಡಲು ಹೆ ೪–೫ ಟನ್ ಇಳವರಿ ನೀಡಬಲ್ಲ 'ಸಿ ಆರ್ ೯೮-೮೦೮೧, ಮಳೆಗಾಲದಲ್ಲಿ ಹೆ/ ೪-೫ ಟನ್ ಇಳುವರಿ ನೀಡಬಲ್ಲ, ಬಿಳಿ ಜಿಗಿ ಹುಳುವಿಗೆ ಪ್ರತಿರೋಧಕ ಶಕ್ತಿಯುಳ್ಳ 'ಸಿ ಆರ್ ೧೪೬-೭೦೦೩, ತಳಿಗಳನ್ನು ಶಿಫಾರಸ್ಸು ಮಾಡಿದೆ.

ಬೆಂಗಳೂರಿನ ಕೃಷಿ ವಿಶ್ವ ವಿದ್ಯಾಲಯವು 'ಐ ಇ ಟಿ ೭೯೯೧. ತಳಿಯನ್ನು ಕರ್ನಾಟಕದ ದಿಣ್ಣೆ ಪ್ರದೇಶಗಳಲ್ಲಿ ಬೆಳೆಯಲು ಗುರುತಿಸಿದೆ. ಈ ತಳಿ ೧೪೫ ರಿಂದ ೧೫೦ ದಿನಗಳಲ್ಲಿ ಕುಯಿಲಿಗೆ ಬಂದು ಹೆ/ ೪ ರಿಂದ ೫ ಟನ್ ಇಳುವರಿ ನೀಡ

ಬಲ್ಲದು. ಇವಲ್ಲದೇ ಕಟಕ್‌ನ ಭತ್ತ ಸಂಶೋಧನಾ ಕೇಂದ್ರವು ಹಲವಾರು ಅಲ್ಪ ಕಾಲಾವಧಿ ತಳಿಗಳನ್ನು ಮಳೆಯಾಧಾರಿತ ತಗ್ಗು ಪ್ರದೇಶ ಗಳಿಗಾಗಿ ರೂಪಿಸಿದೆ. ಇವುಗಳಲ್ಲಿ 'ಸಿ ಆರ್ ೬೬೬-೩೬-೪, 'ಸಿ ಆರ್ ೪೫೫-೧--೨, 'ಸಿ ಆರ್ ೨೨೨ ಎಮ್ ಡಬ್ಲ್ಯು ೧೦, 'ಸಿ ಆರ್ ೪೦೪-೪೮, 'ಸಿ ಆರ್ ೨೮೯-೧೦೪೫, ಪ್ರಮುಖ ' ಇದೇ ಕೇಂದ್ರವು ತಗ್ಗು ಪ್ರದೇಶಗಳಿಗೆ ಅಲ್ಪಕಾಲಾವಧಿಯ 'ಸಿ ಆರ್ ೧೦೧೪, 'ಸಿ ಆರ್ ೨೧೦-೧೦೧೮, 'ಸಿ ಆರ್ ೨೬೦-೧೭೧, 'ಸಿ ಆರ್ ೨೬೦ -೩೦ 'ಸಿ ಆರ್ ೨೬೦-೧೩೬-೧೨೧, ಮತ್ತು 'ಸಿ ಆರ್, ೨೬೦-೨೯೨, ತಳಿಗಳನ್ನೂ ರೂಪಿಸಿದೆ.

## ಸೂಡಾನ್ ಹುಲ್ಲನ್ನು ಬೆಳಸಿ ಮೇವಿನ ಉತ್ಪಾದನೆ ಹೆಚ್ಚಿಸಿ – ೨

ಸೂಡಾನ್ ಹುಲ್ಲು ಅನಾವೃಷ್ಟಿಯನ್ನು ತಡೆದು ಕೊಳ್ಳುವಂಥ ಹುಲ್ಲು. ಒಣ ಹವಾ ಗುಣಗಳಲ್ಲಿ ಚೆನ್ನಾಗಿ ಬೆಳೆಯುತ್ತದೆ. ತುಂಬಾ ಎತ್ತರದ ತೇವಾಂಶವುಳ್ಳ ಮತ್ತು ಕ್ಷಾರ ಗುಣಗಳುಳ್ಳ ಮಣ್ಣಿನಲ್ಲಿ ಸರಿಯಾಗಿ ಬೆಳೆಯುವುದಿಲ್ಲ,

ಇದು ಬೇಸಿಗೆಯ ವಾರ್ಷಿಕ ಬೆಳೆ. ಎರಡರಿಂದ ಮೂರು ಮೀಟರ್ ಎತ್ತರ ಬೆಳೆಯುವುದು. ಮೇ ಮತ್ತು ಜೂನ್ ತಿಂಗಳಲ್ಲಿ ಜೋಳ ಮತ್ತು ಮುಸುಕಿನ – ಜೋಳಕ್ಕಿಂತ ಚೆನ್ನಾಗಿ ಬೆಳೆಯಬಲ್ಲದು. ಆದ್ದರಿಂದ ರೈತರು ಉತ್ತಮ ಮೇವನ್ನು ಸೂಡಾನ್-ಹುಲ್ಲು ಬೆಳೆಸಿ ಪಡೆಯಬಹುದು.

ಮಣ್ಣನ್ನು ತಿರುವಿ ಹಾಕುವಂಥ ನೇಗಿಲಿನಲ್ಲಿ ಒಮ್ಮೆ ಉಳುಮೆ ಮಾಡಿ ಬಳಿಕ ಇನ್ನೆರಡು ಬಾರಿ ಹಸನಾಗಿ ಉತ್ತು (ದೇಸಿ ನೇಗಿಲಿನಲ್ಲಿ) ಜಮೀನನ್ನು ಮಟ್ಟಮಾಡ ಬೇಕು. ಫೆಬ್ರುವರಿಯಿಂದ ಜೂನ್ ತಿಂಗಳ ಮಧ್ಯ ಹೆ/ ೨೫ ರಿಂದ ೩೦ ಕಿಲೋ – ಬಿತ್ತನೆ ಬಳಸಿ ಬಿತ್ತಬೇಕು. ದೇಸಿ ನೇಗಿಲ ಸಾಲಿನಲ್ಲಿ ಬೀಜ ಬಿತ್ತಬಹುದು. ಅಥವಾ ೨ ರಿಂದ ೩ ಸೆಂ. ಮಿ. ಆಳಕ್ಕೆ ಸಾಲಿನಿಂದ ಸಾಲಿಗೆ ೩೦ ಸೆಂ. ಮಿ. ಅಂತರ ಬಿಟ್ಟು ಕೂರಿಗೆಯಲ್ಲಿ ಬಿತ್ತ ಬೇಕು, ಎಸ್ ಎಸ್ ಜಿ ೫೯-೩ ಸುಧಾರಿತ ಸೂಡಾನ್ ಹುಲ್ಲಿನ ತಳಿಯನ್ನು ಬೆಳಸಿ.

ಗೊಬ್ಬರ ಹಾಕಿದಷ್ಟೂ ಒಳ್ಳೆಯ ಮೇವನ್ನು ಗಿಟ್ಟಿಸಬಹುದು. ೩೦ ರಿಂದ ೪೦ ಗಾಡಿ ಕೊಟ್ಟಿಗೆ ಗೊಬ್ಬರವನ್ನು ಬಿತ್ತುವ ೫-೬ ವಾರಗಳ ಮುನ್ನ ಪ್ರತಿ ಹೆಕ್ಟೇರಿಗೆ ನೀಡಬೇಕು. ೨೫೦ ಕಿಲೋ ಅಮೋನಿಯಂ ಸಲ್ಫೇಟ್ ೨೫೦ ಕಿಲೋ ಸೂಪರ್ ಫಾಸ್ಪೇಟ್ ಹಾಗೂ ೬೦ ಕಿಲೋ ಮ್ಯೂರಿಟಅಫ್ ಪೊಟ್ಯಾಶ್‌ಗಳನ್ನು ಬಿತ್ತು-ವಾಗ ಮಣ್ಣಿಗೆ ನೀಡಬೇಕು.



ಬೇಸಿಗೆಯಲ್ಲಿ ಹದಿನೈದು ದಿನಕ್ಕೊಮ್ಮೆ ನೀರು ಹಾಯಿಸಬೇಕು. ಚರಂಡಿನೀ ಅತ್ಯುತ್ತಮ. ಬಿತ್ತಿದ ಮೂರು ವಾರಗಳ ಬಳಿಕ ಒಮ್ಮೆ ಕಳೆ ತೆಗೆಯ ಬೇಕು. ಹುಲ್ಲನ್ನು ಮೊದಲ ಸಲ ಕತ್ತರಿಸಿದ ಮೇಲೆ ೧೨೫ ಕಿಲೋ ಕಾಲ್ಸಿಯಂ ಅಮೋನಿಯಂ ಸಲ್ಫೇಟ್ ಅಥವಾ ಅಮೋನಿಯಂಸಲ್ಫೇಟ್ ೫೦ ಕಿಲೋ ಯುರಿಯವನ್ನು ಪ್ರತಿ ಹೆ/ ನೀಡಬೇಕು. ಬಿತ್ತಿದ ೬೦ ರಿಂದ ೭೦ ದಿನಗಳ ಬಳಿಕ ಮೊದಲ ಸಲ ಹುಲ್ಲುನ್ನು ಕತ್ತರಿಸ ಬಹುದು. ನಂತರ ಪ್ರತಿ ೪೦ ದಿನಗಳಿಗೊಮ್ಮೆ ಕತ್ತರಿಸ ಬಹುದು. ಬೇಸಿಗೆಯಲ್ಲಿ ಮುಂಚಿತವಾಗೇ ಬಿತ್ತಿದರೆ ಮೂರುನಾಲ್ಕು ಬಾರಿ ಕಟಾವು ಮಾಡಿಕೊಳ್ಳ ಬಹುದು. ಪ್ರತಿ ಹೆಕ್ಟೇರಿಗೆ ಸರಾಸರಿ ೪೫೦ ರಿಂದ ೫೦೦ ಕ್ವಿಂಟಾಲ್ ಇಳುವರಿ ಸಾಧ್ಯ.

ಬೀಜದ ಬಿತ್ತನೆ ಪಡೆಯಬೇಕಾದರೆ ಆಗಸ್ಟ ಬಳಿಕ ಹುಲ್ಲನ್ನು ಕಟಾವು ಮಾಡ ಬಾರದು. ಅಕ್ಟೋಬರ್ ಹೊತ್ತಿಗೆ ಬೀಜ ಬಲಿಯುತ್ತದೆ ಬಳಿಕ ಕಟಾವು ಮಾಡಿ ಸಣ್ಣ ಸಣ್ಣ ಕಂತೆಗಳನ್ನು ಕಟ್ಟಿ ಒಣಗಿಸಿ ಬೀಜ ಬೇರ್ಪಡಿಸಿಕೊಳ್ಳಬೇಕು. ಹೆ/ - ೪೦೦ ರಿಂದ ೫೦೦ ಕಿಲೋ ಬೀಜ ಪಡೆಯ ಬಹುದು.

ಈ ಹುಲ್ಲುನ್ನು ಹಸಿರು ಮೇವಾಗಿ ಕತ್ತರಿಸಿ ದನಗಳನ್ನು ಬಿಟ್ಟು ಮೇಯಿಸಿ ಅಥವಾ ಒಣಹುಲ್ಲಾಗಿಯೂ ಬಳಸ ಬಹುದು. ಒಣಗಿಸುವುದೂ ಸುಲಭ. ಇದರಲ್ಲಿ (ಹಸಿರು ಹುಲ್ಲಿನಲ್ಲಿ) ಶೇಕಡ ೬ ರಿಂದ ೮ ರಷ್ಟು ಕಚ್ಚಾ ಪ್ರೋಟೀನ್ ಇರುತ್ತದೆ. ಸುಣ್ಣ ಮತ್ತು ರಂಜಕದ ಅಂಶಗಳು ಇದ್ದು ಇದರೊಂದಿಗೆ ಕುದುರೆ ಮಸಾಲೆ, ಅಲಸಂದೆ ಗೋರಿ ಕಾಯಿಯ ಬೂಸ, ಸೋಯ ಬೀನ್ ಅಥವಾ ಇತರ ದ್ವಿದಳ ಧಾನ್ಯಗಳ ಬೂಸ ಬೆರೆಸಿದರೆ ರಾಸುಗಳು ಚೆನ್ನಾಗಿ ಜೀರ್ಣಿಸಿಕೊಳ್ಳುವಂಥ ಅತ್ಯುತ್ತಮ ಮೇವನ್ನು ಪಡೆಬಯಬಹುದು.

ಒಂದು ಮೀಟರ್ ಎತ್ತರ ಬೆಳೆಯುವ ಸೂಡಾನ್ ಹುಲ್ಲುನ್ನು ಎಂದೂ ಕತ್ತರಿಸ್ಸ ಬಾರದು ಏಕೆಂದರೆ ಎಳೆಯ ಹುಲ್ಲಿನಲ್ಲಿ ಹೈಡ್ರೋಸಿನಿಕ್ ಆಮ್ಲವಿರುತ್ತದೆ.

## ಹಾಲಿನಲ್ಲಿ ಪೋಷಕಾಂಶ ಮತ್ತು ಖನಿಜಾಂಶಗಳು–೩

ಕರ್ನಾಲ್‌ನಲಿನ ರಾಷ್ಟ್ರೀಯ ಹೈನುಗಾರಿಕೆ ಸಂಶೋಧನಾ ಸಂಸ್ಥೆಯ ವಿಜ್ಞಾನಿಗಳು ಮುರ್ರಾ ತಳಿಯ ಎಮ್ಮೆಗಳು ಮತ್ತು ಸಾಹಿವಾಲ್ ತಳಿಯ ಹಸುಗಳು ಮೇವನ್ನು ಜೀರ್ಣಿಸಿ ಕೊಳ್ಳುವ ಸಾಮರ್ಥ್ಯ, ಹಾಲಿನ ಇಳುವರಿ, ಖನಿಜಾಂಶಗಳನ್ನು ಮತ್ತು ಪೋಷಕಾಂಶಗಳನ್ನು ಸಮರ್ಥವಾಗಿ ಬಳಸಿಕೊಳ್ಳುವ ಶಕ್ತಿಯ ಬಗ್ಗೆ ಅಧ್ಯ

ಯನಗಳನ್ನು ನಡೆಸಿದ್ದಾರೆ. ಒಂಬತ್ತು ವಾರಗಳ ಅಧ್ಯಯನದ ಬಳಿಕ ಈ ಎಮ್ಮೆಗಳ ಸಾಮರ್ಥ್ಯ ಉತ್ತಮವಾಗಿರುವುದು ಕಂಡು ಬಂದಿದೆ.

ಮುಸುಕಿನ ಜೋಳ ಮತ್ತು ಕುದುರೆ ಮಸಾಲೆಯ ಹಸಿರು ಮೇವು ಹಾಗೂ ಪೌಷ್ಟಿಕ ಮೇವಿನ ಮಿಶ್ರಣವನ್ನು ಪ್ರಯೋಗಕ್ಕೊಳಪಡಿಸಿದ ಈ ಕರಾವಿನ ರಾಸುಗಳಿಗೆ ನೀಡಲಾಯಿತು. ಕಚ್ಚಾ ನಾರಿನ ಅಂಶವನ್ನು ಎಮ್ಮೆಗಳು ಶೇಕಡಾ ೬೯.೮ ರಷ್ಟು ಬಳಸಿಕೊಂಡರೆ. ಹಸುಗಳು ಶೇಕಡಾ ೬೪.೭೦ ರಷ್ಟು ಬಳಸಿಕೊಂಡಿವೆ. ಅಲ್ಲದೇ ಎಮ್ಮೆಗಳು ಸಾರಜನಕ, ಸುಣ್ಣ ಹಾಗೂ ರಂಜಕದ ಅಂಶಗಳನ್ನು ಚೆನ್ನಾಗಿ ಹಿಡಿದಿಟ್ಟುಕೊಳ್ಳುವ ಶಕ್ತಿ ಹೊಂದಿವೆ, ಜೀರ್ಣಿಸಿಕೊಳ್ಳಬಲ್ಲ ಕಚ್ಚಾ ಪ್ರೋಟಿನ್ ಮತ್ತು ಜೀರ್ಣಿಸಿಕೊಳ್ಳಬಲ್ಲ ಒಟ್ಟು ಪೋಷಕಾಂಶಗಳನ್ನು ಎಮ್ಮೆಗಳು ಕ್ರಮವಾಗಿ ನಿತ್ಯವೂ, ೧.೩೧ ಮತ್ತು ೮.೯೦ ಕಿಲೋ ತಿನ್ನ ಬಲ್ಲವಾದರೆ ಹಸುಗಳು ೦.೯೫ ಮತ್ತು ೫.೯೨ ಕಿಲೋ ತಿನ್ನಬಲ್ಲವು.

ಎಮ್ಮೆಯ ಹಾಲಿನಲ್ಲಿ ಸರಾಸರಿ ಶೇಕಡ ೭.೦೪ ರಷ್ಟು ಕೊಬ್ಬಿನ ಅಂಶವಿದ್ದರೆ ಹಸುವಿನ ಹಾಲಿನಲ್ಲಿ ಇದು ಶೇಕಡ ೪.೬೩ ರಷ್ಟಿದೆ. ಎಮ್ಮೆ ಕಡಿಮೆ ಗುಣಮಟ್ಟದ ಮೇವನ್ನು ತಿಂದೂ ಉತ್ತಮ ಮಟ್ಟದ ಸಾರಜನಕ ಮತ್ತು ಖನಿಜಾಂಶಗಳನ್ನು ಗಿಟ್ಟಿಸಿ ಕೊಳ್ಳಬಲ್ಲದು.





# ಗ್ರಾಮಾಂತರ ಬಸವ ಜಯಂತಿ-199

ಹೆಚ್. ವಿ. ವೀರಭದ್ರಯ್ಯ, ಉಪನ್ಯಾಸಕರು ಕನ್ನಡ ವಿಭಾಗ ಸಿದ್ಧಗಂಗಾ ಕಾಲೇಜು ತುಮಕೂರು

ಆತ್ಮೀಯ ಶರಣ ಬಂಧು,

ಬಸವ ಸೇವಾ ಮಣಿಹದಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳು ಹಗಲಿರುಳೆನ್ನದೆ, ಇರುಳೆಂದರಿಯರು, ದಿನವೆಂದರಿಯರು, ವಾರವೆಂದರಿಯರು, ನಿರಂತರ ಕಾಯಕಶೀಲರಾಗಿ ನಡೆದಿದ್ದಾರೆ. ಬಸವಣ್ಣನೇನಾದರೂ ಇಂದು ಭೌತಿಕವಾಗಿ ಜೀವಿಸಿದ್ದರೆ ನಾಚಿತಪ್ಪಿಕೊಳ್ಳುತ್ತಿದ್ದ ಪರಮ ಪೂಜ್ಯರನ್ನು ಕಲ್ಯಾಣದಲ್ಲಿ ಹೊತ್ತಿಸಿದ ಬಸವ ಜ್ಯೋತಿ ಕಾಲ ದೇಶಗಳನ್ನು ದಾಟಿ ಬೆಳಗುತ್ತಲೇ ಬರುತ್ತಿದೆ, ಮುತ್ತಿರುವ ನೂರಾರು ರೂಪದ ಕತ್ತಲೆಯನ್ನು ಹೊಡೆದೋಡಿಸುತ್ತಲೇ ಇದೆ. ದಯೆಯ ದೀವಿಟಿಕೆ ಹಿಡಿದು ಬಸವ ಕಮ್ಮಟದ ಶಿವನಾಣ್ಯ ವೆನಿಸಿ ಶ್ರೀ ಶ್ರೀ ಗಳು ನಡೆದಿದ್ದಾರೆ.

ದಿನಾಂಕ 24.5.87 ರಂದು ಕರ್ನಾಟಕದ ಹೆಮ್ಮೆಯ ರಾಜಧಾನಿ ಬೆಂಗಳೂರಿನಲ್ಲಿ, ರಾಜಾಜಿನಗರ ಬಡಾವಣೆಯಲ್ಲಿ ಬಸವ ಜಯಂತಿಯನ್ನು ಆಚರಿಸಿದ ಸಂತೋಷ ಬಸವತತ್ತ್ವ ಪ್ರೇಮಿಗಳದು. ಮಲೆಯ ಮಹದೇಶ್ವರ ದೇವಸ್ಥಾನದ ಪ್ರಾರಂಭೋತ್ಸವದ ಸಂದರ್ಭದಲ್ಲಿ ಶರಣ ತತ್ತ್ವಗಳ ಸಂದೇಶವನ್ನು ಪ್ರಚಾರ ಮಾಡುವ ಕಾರ್ಯಕ್ರಮವೂ ಮೂಡಿಬಂತು. ಹಬ್ಬದ ಸಡಗರದ ಮಧ್ಯೆ ನಗರದ ಬಂಧುಗಳು ಕೆಲವೇ ಗಂಟೆಗಳಷ್ಟು ಕಾಲವಾದರೂ ತಮ್ಮ ಯಾಂತ್ರಿಕ ಜೀವನವನ್ನ ಮರೆತು, ಮಹಾನು ಭಾವರ, ಬಸವಾದಿ ಶರಣರ ಸ್ಮರಣೆಯಲ್ಲಿ ತಮ್ಮ ಮನದ ಮೈಲಿಗೆಯನ್ನು ತೊಳೆದುಕೊಳ್ಳುವ ಪ್ರಯತ್ನ ಮಾಡಿದರು.

ಸಭೆಯನ್ನು ಆಶೀರ್ವದಿಸಿ ಅನುಗ್ರಹ ಭಾಷಣ ಮಾಡುತ್ತ ಪರಮ ಪೂಜ್ಯ ಶ್ರೀ ಶ್ರೀಗಳು ಬಸವಣ್ಣ ಅಲೌಕಿಕ ವ್ಯಕ್ತಿಯಲ್ಲ. ಹುಟ್ಟು ಹೋರಾಟಗಾರ. ಒಂದು ಜನಾಂಗಕ್ಕೆ ಒಂದು ದೇಶಕ್ಕೆ ಸೇರಿದವನಲ್ಲ ವಿಶ್ವಬಂಧು, ವಿಶ್ವಧರ್ಮಿ ಎನ್ನುತ್ತ ಮುಂದುವರಿದು ಬಸವಣ್ಣನವರು ಮಾಡಿದ ಬಹುಮುಖ ಸೇವೆಯ ಪರಿಚಯ ಮಾಡಿಕೊಟ್ಟರು. ಕಾಯಕದಂಥ ಮಹಾತತ್ತ್ವವನ್ನು ಜಗತ್ತಿಗೆ ನೀಡಿ ನಿತ್ಯನೂತನ ಸೂತ್ರವನ್ನು ಆಚರಿಸಿ ತೋರಿಸಿದರು. ಕಾಯಕ ಕೇವಲ ಲೌಕಿಕ ಶ್ರೀ ಮಂತಿಕೆಯನ್ನಷ್ಟೇ ತರುವ ವಿಧಾನವಲ್ಲಿ ಅಂತರಂಗಿಕ ಪ್ರಗತಿಯನ್ನು ಸಾಧಿಸುವ ವಿಶಿಷ್ಟರೀತಿ ದುಡಿಮೆಯಲ್ಲಿ ಜೀವನದ ಅರ್ಥವಂತಿಕೆಯನ್ನು ಸಮಾಜದ ಅಭಿವೃದ್ಧಿಯನು, ಸಮಷ್ಟಿಯ ಕಲ್ಯಾಣವನ್ನು, ಕೊನೆಗೆ ಜೀವನದ ಸಾರ್ಥಕತೆಯನ್ನ ಕಂಡುಕೊಳ್ಳುವ

ದೇವಪಥ ಕಾಯಕ ಅಷ್ಟೆ ಅಲ್ಲ ಬಂದ ಗಳಿಕೆಯನ್ನು ' ಅಪರಿಗ್ರಹ ' ತತ್ತ್ವದ ಅನುಸಾರವಾಗಿ ತನಗೆಷ್ಟು ಬೇಕೋ ಅಷ್ಟನ್ನು ಮಾತ್ರ ಸ್ವೀಕರಿಸಿ ಉಳಿದುದನ್ನ ಸಮಾಜ ಸೇವೆಗೆ ಅರ್ಪಿಸುವ ದಾಸೋಹ ಕಾಯಕದ ಫಲ. ಮೇಲಾಗಿ ಕಾಯಸ್ಥವಾದ ಆತ್ಮನನ್ನು ಅರಿಯಲು ಯೋಗ್ಯಮಾರ್ಗ. ಮತ್ತು ಸ್ವಾಭಿಮಾನದ ಬೀಗದ ಕೈ ಕಾಯಕವಾದರೆ, ಸಿರಂಕಾರದ ನಿಚ್ಚಣಿಕೆ ದಾಸೋಹ. ಇಂದು ರಾಷ್ಟ್ರದ ಬಡತನ ನಿವಾರಣೆಯಾಗ ಬೇಕಾದರೆ ಕಾಯಕ - ದಾಸೋಹ ಗಳಿಂದ ಮಾತ್ರ ಸಾಧ್ಯ ಎಂದು ಪೂಜ್ಯ ಪಾದರು ನುಡಿದರು.

ರಾತ್ರಿ 10 30 ಕ್ಕೆ ಸರಿಯಾಗಿ ನವರಂಗ್ ಟಾಕೀಸಿನ ಪಕ್ಕದ ಬಯಲು ರಂಗಮಂಟಪದಲ್ಲಿ ನಾಟಕ ಜಗಜ್ಯೋತಿ ಬಸವೇಶ್ವರ ಪ್ರಾರಂಭವಾಯಿತು. ನಗರದ ಜನ ಬಂಧುಗಳು ಬೆಳಗಿನವರೆಗೆ ನಾಟಕ ನೋಡಿ ತೃಪ್ತಿಯನ್ನು ವ್ಯಕ್ತಪಡಿಸಿದರು. ನಾಟಕ ಮುಗಿಸಿ ಪಾತ್ರಧಾರಿಗಳು ಹೊರಬರುತ್ತಿದ್ದಾಗ ಶ್ರೀ ಸಿದ್ಧಗಂಗಾ ತಾಂತ್ರಿಕ ಶಿಕ್ಷಣ ಸಂಸ್ಥೆಯ ಪ್ರಾಚಾರ್ಯರಾದ ಶ್ರೀ ಪರಮೇಶ್ವರಪ್ಪನವರು ಅಭಿನಂದಿಸುತ್ತ, ಎಷ್ಟು ಭಾರಿ ನೋಡಿದರೂ ಇನ್ನೂ ನೋಡ ಬೇಕೆನಿಸುತ್ತದೆ ನಾಟಕ ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.





## ' ಸಿದ್ಧಗಂಗಾ ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರಬಳಗ.

ಸರ್ವಶ್ರೀ :—

1241 ವೈ. ಎ. ಪ್ರಶಾಂತಕುಮಾರ್ ಬಿನ್ ವೈ. ವಿ. ಅಶ್ವತ್ಥನಾರಾಯಣಪ್ಪ ಜಂಗಮ ಕೋಟೆ, ಬೆಂಗಳೂರು ಸಿಟಿ, ಆರ್. ಎಮ್. ಎಸ್.

1242 ರುದ್ರಾಚಾರ್ ಬಿನ್ ಈಶ್ವರಾಚಾರ್, ವಿಶ್ವಕರ್ಮ ಜಂಗಮಕೋಟೆ, ಬೆಂಗಳೂರು ಸಿಟಿ, ಆರ್ ಎಮ್. ಎಸ್.

1243 ಶ್ರೀಮತಿ ಲೀಲಾವತಮ್ಮ W/o ಪುಟ್ಟಸ್ವಾಮಿ, ಸೊರಬಗೆರೆ, ಹೊಸಕೋಟೆ ತಾ|| ಬೆಂಗಳೂರು ಜಿಲ್ಲೆ,

1244 ಸಿ. ಬಸವರಾಜು S/o ಪುಟ್ಟಣ್ಣ ವ್ಯಾಪಾರಿಗಳು, ಬೂದಿಗೆರೆ, ಬೆಂಗಳೂರು [illegible].

1245 ಎಂ. ನ[illegible] ಮತ್ತು ಸಹೋದರರು, ಹೊಸರಸ್ತೆ, ಕೊಳ್ಳೇಗಾಲ- 5714[illegible] ಮೈಸೂರು ಜಿಲ್ಲೆ.

1246 ಬಿ. ಎಸ್. ಗಂಗರಾಜು, **D. No.** 58, ಕಾಳತ್ತೂರ್ ಲೇಔಟ್, ಗಂಗಮ್ಮ ಸರ್ಕಲ್, ಜಾಲಹಳ್ಳಿ ಪಶ್ಚಿಮ ಬೆಂಗಳೂರು 560013

1247 ಆರ್. ಜಯರಾವ್ ಬಿನ್ ಎಂ. ರಾಮಯ್ಯ, ಅರಸಪ್ಪನ ಛತ್ರ ಅಂಕೆರೆ ಅಂಚೆ, ತುಮಕೂರು ತಾಲ್ಲೂಕು.

1248 ಡಿ. ಸೋಮಶೇಖರಯ್ಯ, ಬಿನ್ ದೊಡ್ಡವೀರಪ್ಪ, ಬ್ರಹ್ಮಸಂದ್ರ, ತುಮಕೂರು ತಾಲ್ಲೂಕು.

1249 ಎಸ್. ಬಸವರಾಜಯ್ಯ, ಬಿ. ಇ., ನಂ. 1857/A 5 ನೇ ಮುಖ್ಯ -ರಸ್ತೆ, ಆರ್. ಪಿ. ಸಿ. ಲೇಔಟ್, ವಿಜಯನಗರ, ಬೆಂಗಳೂರು-560040

1250 ಡಾ|| ಆರ್. ವೀರಭದ್ರಯ್ಯ, ನಂ. 54, 50 ಅಡಿ ರಸ್ತೆ, ಹನುಮಂತ ನಗರ, ಬೆಂಗಳೂರು-560019

1251 ಹೆಚ್. ಸಿ. ಪುಟ್ಟನಂಜಯ್ಯ, " ಮಾನಸ " ಜಾಕ್ ಅಂಡ್ ಜಿಲ್ ಹತ್ತಿರ, ಸರ್ಕಾರಿಕಾಲೇಜು ಎದುರು ತುಮಕೂರು

1252 ಆರ್. ಎಂ. ಬಿ. ಆರಾಧ್ಯ, ನಂ. 26, ವಿಶ್ವನಾಥಯ್ಯರಸ್ತೆ, ಮಾಧವ ನಗರ, ಬೆಂಗಳೂರು-560001

(ಮುಂದುವರಿಯುತ್ತದೆ.)

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ